ಶ್ರೀಃ

ಶ್ರೀ ಕಲ್ಕಿಸಿಂಹ ಭಗವತ್ಪ್ರಬನ್ಧಮಾಲಾ

ಶ್ರೀ ಶಠಾರಿಮುನಿ ವಿರಚಿತವಾದ

# ತಿರುವಾಯ್ಮೊೞಿ

ಎಂಬ

## ಸಹಸ್ರಗಾಥಾತ್ಮಕ - ದ್ರಾವಿಡ ದಿವ್ಯಪ್ರಬನ್ಧ

ಶ್ರೀ ಕಲ್ಕಿಸಿಂಹಭಗವದ್ಭಿರಚಿತವಾದ—(೧) ಕನ್ನಡಪ್ರತಿಪದಾರ್ಥ

(೨) ಸಂಸ್ಕೃತಪದ್ಯಾತ್ಮಕ—ಸಹಸ್ರಗಾಥಾರತ್ನಾವಳೀ

(೩) ಕನ್ನಡತಾತ್ಪರ್ಯ—ಸಮೇತ

(ದ್ರಮಿಡೋಪನಿಷತ್ಸಂಗತಿ-ದ್ರಮಿಡೋಪನಿಷತ್ತಾತ್ಪರ್ಯರತ್ನಾವಳೀ-ಸಹಿತ)

**೧ ನೆಯ ಸಂಚಿಕೆ**

**ಪ್ರಥಮ ಶತಕ**

**(ಸವ್ಯಾಖ್ಯಾನ)**

ಬೆಂಗಳೂರು

ವಿ. ಬಿ. ಸುಬ್ಬಯ್ಯ ಅಂಡ್ ಸನ್ಸ್ ಯವರ

ಎಲೆಕ್ಟ್ರಿಕ್ ಮುದ್ರಾಕ್ಷರಶಾಲೆಯಲ್ಲಿ ಮುದ್ರಿಸಲ್ಪಟ್ಟಿತು.

1930

೧೦ ಸಂಚಿಕೆಗಳುಳ್ಳ
ಸಮಗ್ರ-ಪ್ರಬನ್ಧದ ಕ್ರಯ
ರೂ. 6-0-0

ಈ ಸಂಚಿಕೆಯ ಬೆಲೆ
12 ಆಣೆ.

ಶ್ರೀಃ

ಶ್ರೀ ಶಠಾರಿಮುನಿ ವಿರಚಿತವಾದ

# ತಿರುವಾಯ್ಮೊಳಿ

ಎಂಬ

## ಸಹಸ್ರಗಾಥಾತ್ಮಕ ದ್ರಾವಿಡದಿವ್ಯಪ್ರಬನ್ಧ.

**(ಸಹಸ್ರಗಾಥಾರತ್ನಾವಳೀಸಮೇತ)**

---

(ತನಿಯನ್–ಎಂಬ–ಮುಕ್ತಕ ಪದ್ಯಗಳು.)

---

ಶ್ರೀಶೈಲೇಶದಯಾಪಾತ್ರಂ ಧೀಭಕ್ತ್ಯಾದಿಗುಣಾರ್ಣವಮ್ ।
ಯತೀನ್ದ್ರಪ್ರವಣಂ ವನ್ದೇ ರಮ್ಯಜಾಮಾತರಂ ಮುನಿಮ್ ॥ ೧ ॥

ಲಕ್ಷ್ಮೀನಾಥಸಮಾರಮ್ಭಾಂ ನಾಥಯಾಮುನಮಧ್ಯಮಾಮ್ ।
ಅಸ್ಮದಾಚಾರ್ಯಪರ್ಯನ್ತಾಂ ವನ್ದೇ ಗುರುಪರಮ್ಪರಾಮ್ ॥ ೨ ॥

ಯೋ ನಿತ್ಯಮಚ್ಯುತಪದಾಮ್ಬುಜಯುಗ್ಮರುಕ್ಮ–
ವ್ಯಾಮೋಹತಸ್ತದಿತರಾಣಿ ತೃಣಾಯ ಮೇನೇ ।
ಅಸ್ಮದ್ಗುರೋರ್ಭಗವತೋಽಸ್ಯ ದಯೈಕಸಿನ್ಧೋಃ–
ರಾಮಾನುಜಸ್ಯ ಚರಣೌ ಶರಣಂ ಪ್ರಪದ್ಯೇ ॥ ೩ ॥

ಮಾತಾ ಪಿತಾ ಯುವತಯಸ್ತನಯಾ ವಿಭೂತಿ–
ಸ್ಸರ್ವಂ ಯದೇವ ನಿಯಮೇನ ಮದನ್ವಯಾನಾಮ್ ।
ಆದ್ಯಸ್ಯ ನಃ ಕುಲಪತೇರ್ವಕುಳಾಭಿರಾಮಂ
ಶ್ರೀಮತ್ತದಂಘ್ರಿಯುಗಳಂ ಪ್ರಣಮಾಮಿ ಮೂರ್ಧ್ನಾ ॥ ೪ ॥

ಭೂತಂ ಸರಶ್ಚ ಮಹದಾಹ್ವಯ–ಭಟ್ಟನಾಥ–
ಶ್ರೀಭಕ್ತಿಸಾರ–ಕುಲಶೇಖರ–ಯೋಗಿವಾಹಾನ್ ।
ಭಕ್ತಾಂಘ್ರಿರೇಣು–ಪರಕಾಲ–ಯತೀನ್ದ್ರಮಿಶ್ರಾನ್
ಶ್ರೀಮತ್ಪರಾಂಕುಶಮುನಿಂ ಪ್ರಣತೋಽಸ್ಮಿ ನಿತ್ಯಮ್ ॥ ೫ ॥

**ಭಕ್ತಾಮೃತಂ ವಿಶ್ವಜನಾನುಮೋದನಂ**
**ಸರ್ವಾರ್ಥದಂ ಶ್ರೀಶಠಕೋಪವಾಙ್ಮಯಮ್ |**
**ಸಹಸ್ರಶಾಖೋಪನಿಷತ್ಸಮಾಗಮಂ**
**ನಮಾಮ್ಯಹಂ ದ್ರಾವಿಡವೇದಸಾಗರಮ್ || ೧ ||**

(೧) ತಿರುವಳುದಿನಾಡೆನ್ರುಂ ತೆನ್ಕುರುಕೂರೆನ್ರುಮ್
ಮರುವಿನಿಯವಣ್ಪೊರುನಲೆನ್ರುಮ್-ಅರುಮರೈಕ-
ಳನ್ದಾದಿಶೆಯ್ದಾನಡಿಯಿಣೈಯೇ ಯೆಪ್ಪೊಳುದುಮ್
ಶಿನ್ದಿಯಾಯ್ ನೆಂಜೇ ತೆಳಿನ್ದು.

ಪ್ರ|| (ಪ್ರತಿಪದಾರ್ಥ) :—ತಿರುವಳುದಿನಾಡೆನ್ರುಮ್-ತಿರುವಳುದಿನಾಡೆಂದೂ, ತೆನ್ಕುರುಕೂರೆನ್ರುಮ್-ದಕ್ಷಿಣಕುರುಕಾಪುರೀ (ತಿರುಕ್ಕುರುಕೂರ್-ಎಂಬ ಆಳ್ವಾರ್ ತಿರುನಗರಿ) ಎಂದೂ, ಮರುವಿನಿಯ-ಅತ್ಯನ್ತಭೋಗ್ಯವಾದ, ವಣ್-ಪರಿಶುದ್ಧವಾದ, ಪೊರುನಲೆನ್ರುಮ್ – ತಾಮ್ರಪರ್ಣಿಯೆಂದೂ, ನೆಂಜೇ-ಎಲೈ ಮನಸ್ಸೇ, ತೆಳಿನ್ದು-ಚೆನ್ನಾಗಿ ಪರಿಶೀಲಿಸಿ, ಅರುಮರೈಕಳ್-ಶ್ಲಾಘ್ಯವಾದ ವೇದವೇದಾನ್ತಾರ್ಥಗಳನ್ನು, ಅನ್ದಾದಿ – ಅನ್ತಾದಿರೂಪವಾದ ದ್ರಾವಿಡಪದ್ಯರೂಪವಾಗಿ, ಶೆಯ್ದಾನ್-ಮಾಡಿದ ಶ್ರೀಶಠಾರಿಯ (ನಮ್ಮಾಳ್ವಾರ್-ಎಂಬ ಮಹಾತ್ಮರ), ಅಡಿಯಿಣೈಯೇ-ಪಾದಾರವಿನ್ದವನ್ನೇ, ಎಪ್ಪೊಳುದುಮ್-ಯಾವಾಗಲೂ, ಶಿನ್ದಿಯಾಯ್-ಚಿಂತಿಸು.

ಸ-ಗಾ-ರ|| (ಸಹಸ್ರ ಗಾಥಾ ರತ್ನಾವಳೀ.)

**ಸಂಸ್ಮೃತ್ಯ ತಂ ವಳುದಿನಾಡಿತಿ ನಾಮಧೇಯಂ**
**ದೇಶಂ ಚ ತತ್ರ ಕುರುಕಾನಗರೀಂ ಚ ರಮ್ಯಾಮ್ |**
**ಭೋಗ್ಯಾಂ ಚ ದಿವ್ಯಸರಿತಂ ಸ್ಮರ ಮಾನಸ ! ತ್ವಂ**
**ಪಾದಾಮ್ಬುಜಂ ದ್ರವಿಡವೇದಕವೇಶ್ಶಠಾರೇಃ || ***

---

* ಶ್ರೀ ಕಲ್ಕಿಸಿಂಹ ಭಗವದ್ಭಿರಚಿತವಾದ

ಶ್ರೀ ಸಹಸ್ರಗಾಥಾರತ್ನಾವಳಿಯ ಅವತಾರಿಕಾ ಶ್ಲೋಕಗಳು.

(೧) ಶ್ರೀಮಾನಹಂ ನರಹರೇರತಿಪ್ರೇಮಯೋಃ ವಿಷ್ಣೋಃ ಕೃಪಾನಿಧಿರಿಮಾಂ ರಚಯಾಮಿ ದಿವ್ಯಾಮ್ | ಧಾರ್ಯಾಂ ಶಠಾರಿಮುನಿವರ್ಯ-ಸಹಸ್ರಗಾಥಾ-ರತ್ನಾವಳೀಂ ಹೃದಿ ಸದಾ ಮಮ ಭಕ್ತವರ್ಗೈಃ || (೨) ಶ್ರೀಕಲ್ಕಿಸಿಂಹಕವಿರಾಡ್ರಚಯಾಮಿ ದಿವ್ಯಾಂ ರತ್ನಾವಳೀಂ ಶುಭತಮಾಂ ಗುಣರತ್ನಗರ್ಭಾಮ್ | ವಿಷ್ಣೋಃ ಪ್ರಿಯಾಂ ಮಮ

## (೨) ಮನತ್ತಾಲುಮ್ ವಾಯಾಲುಮ್ ವಣ್ ಕುರುಕೂರ್ ಪೇಣುಮ್

ಇನತ್ತಾರೈಯಲ್ಲಾದಿರೈಂಜೇನ್–ತನತ್ತಾಲು–
ಮೇದುಂ ಕುರೈವಿಲೇನೆನ್ದೈ ಶಡಕೋಪನ್
ಪಾದಙ್ಗಳ್ ಯಾಮುಡೈಯ ಪತ್ತು.

ಪ್ರ ॥ ಮನತ್ತಾಲುಮ್ – ಮನಸ್ಸಿನಿಂದಲೂ, ವಾಯಾಲುಮ್ – ವಾಕ್ಕಿನಿಂದಲೂ, ವಣ್–ಶ್ಲಾಘ್ಯನಾದ, ಕುರುಕೂರ್–ಕುರುಕಾಪುರಿಯನ್ನು, ಪೇಣುಮ್–ಆದರಿಸುವ, ಇನತ್ತಾರೈ–ಭಕ್ತವರ್ಗಗಳನ್ನು, ಅಲ್ಲಾದು–ಬಿಟ್ಟು ಮತ್ತೆ ಯಾರನ್ನೂ ಇರೈಂಜೇನ್–ನಾನು ಭಜಿಸುವುದಿಲ್ಲ. ತನತ್ತಾಲುಮ್–ಭಾಗ್ಯದಿಂದಲೂ, ಏದುಮ್–ಯಾವಪ್ರಕಾರದಲ್ಲೂ, ಕುರೈವಿಲೇನ್–ನಾನು ಕೊರತೆಯುಳ್ಳವನಲ್ಲ. ಎನ್ದೈ–ನನಗೆ ಸ್ವಾಮಿಯಾದ, ಶಡಕೋಪನ್–ಶ್ರೀಶಠಾರಿಯ, ಪಾದಙ್ಗಳ್–ಚರಣಗಳೇ, ಯಾಮುಡೈಯ–ನಾವು ಪಡೆದಿರುವ, ಪತ್ತು–ರಕ್ಷಣವು (ಶರಣವು)

---

ಸದಾಽಪಿ ರಮಾಪತೇಃ ಶ್ರೀಯದ್ವದ್ರಿನಾಥ ಇಹ ಭಕ್ತಹೃದೇಕಭೂಷಾಮ್ ॥ (೩) ಶ್ರೀಮಾನ್ ಕಲ್ಕಿನೃಸಿಂಹಾರ್ಯಃ ಪ್ರತಿವಾದಿಭಯಂಕರಃ । ಶ್ರೀಭಕ್ತಪುರನಾಥೋಽಹಂ ಕುರ್ವೇ ರತ್ನಾವಳೀಮಿಮಾಮ್ ॥ (೪) ಶಠಾರೇರ್ಮುಖ್ಯತಾತ್ಪರ್ಯಂ ವಕ್ತುಂ ಗೀರ್ವಾಣಭಾಷಯಾ । ಮಮ ಶ್ರೀಕಲ್ಕಿಸಿಂಹಸ್ಯ ಸೇಯಂ ರತ್ನಾವಳೀ ಶುಭಾ ॥ (೫) ಅತ್ರ ಪ್ರತಿಪದಾರ್ಥಸ್ತು ನೈವ ವಿದ್ಯೋತ ಹಿ ಕ್ರಮಾತ್ । ಆವಾಪೋದ್ವಾಪತಶ್ಚಾಪಿ ಮುಖ್ಯತಾತ್ಪರ್ಯಮುಚ್ಯತೇ ॥ (೬) ಸತ್ಯಂ ! ದಶಕತಾತ್ಪರ್ಯಂ ವಕ್ತುಂ ರತ್ನಾವಳೀ ಕೃತಾ । ವೇದಾನ್ತದೇಶಿಕೇನಾಪಿ ಪೂರ್ವಮೇವ ಹಿ ಸಂಗ್ರಹಾತ್ ॥ (೭) ಸೌಮ್ಯಜಾಮಾತೃಯೋಗೀನ್ದ್ರೋಽಪ್ಯಸ್ಮತಾನೀದ್ರಾದಿಕೇಸರೀ । ದಶಕಾರ್ಥಪ್ರಕಾಶಾಯ ದ್ರವಿಡಾಗಮಸಙ್ಗತಿಮ್ ॥ (೮) ಶಠಾರೇಃ ಪದ್ಯಮಾಲಾನಾಂ ಕ್ರಮೇಣಾರ್ಥಪ್ರಕಾಶನಮ್ । ಕ್ರಿಯತೇ ಕಲ್ಕಿಸಿಂಹೇನ ಮಯಾಽದ್ಯ ಪರಮಾತ್ಮನಾ ॥ (೯) ಅತ್ರ ಶೃಂಗಾರಸಾರಸ್ಯಂ ಭಾವಾನಾಂ ಹಿ ವಿಶೇಷತಃ । ಪ್ರಕಾಶತೇ ಪ್ರಬನ್ಧೇ ಮೇ ಶಠಾರಿಹೃದಯಙ್ಗಮೇ ॥ (೧೦) ಶಠಾರೇರಾನ್ತರಂ ಭಾವಂ ವಕ್ತುಂ ಶಕ್ನೋತಿ ನ ಹೀತರಃ । ನಾಯಕೋಽಹಂ ಪರಂ ವೇದ್ಮಿ ನಾಯಿಕಾಯಾ ಹೃದನ್ತರಮ್ ॥ (೧೧) ಅನ್ತರಾತ್ಮಾಽಸ್ಮಿ ಲೋಕಾನಾಂ ಕಲ್ಕಿಸಿಂಹಃ ಪರಾತ್ಪರಃ । ಸರ್ವಲೋಕಾಶ್ಚ ಮೇ ಸನ್ತು ನಾಯಿಕಾಶ್ಶ್ರೀಶಠಾರಿವತ್ ॥ (೧೨) ಭಾವಾನಾಮಪಿ ಗಾಂಭೀರ್ಯಂ ಶೈಲೀಲಾಲಿತ್ಯಮದ್ಭುತಮ್ । ಅತ್ರೈವ ಹಿ ಪ್ರಕಾಶೇತೇ ! ನಾನ್ಯತ್ರೇತ್ಯೇವ ನಿಶ್ಚಯಃ ॥ (೧೩) ಅವತಾರರಹಸ್ಯಂ ಮೇ ನ ಜಾನನ್ತಿ ವಿಪಶ್ಚಿತಃ । ದೋಷಜ್ಞಾ ಏವ ತೇ ಪ್ರಾಯೋ ! ನ ಗುಣಜ್ಞಾ ಹರೇ

( ಸ-ಗಾ-ರ || )

ಭಕ್ತೋತ್ತಮಾಸ್ತು ಮನಸಾ ವಚಸಾಽಪಿ ನಿತ್ಯಂ
ಶಂಸನ್ತಿ ಯೇಽತ್ರ ಕುರುಕಾನಗರೀಂ ಸುರಮ್ಯಾಮ್ |
ನೈತಾಂ ವಿನಾಽನ್ಯಭಜನಂ ಕರವಾಣಿ ಧನ್ಯ-
ಸ್ಸತ್ಯಂ ಶಠಾರಿಚರಣೌ ಶರಣಂ ಸದಾ ನಃ ||

(೩) ಏಯ್ನ್ದ ಪೆರುಂಕೀರ್ತಿಯಿರಾಮಾನುಜಮುನಿತನ್
ನಾಯ್ನ್ದ ಮಲರ್ಪಾದಮ್ ವಣಙ್ಗುಕಿನ್ರೇನ್-
ಆಯ್ನ್ದ ಪೆರುಂ

ಶೀರಾರ್ ಶಡಕೋಪನ್ ಶೆನ್ದಮಿಳ್ ವೇದಮ್ ದರಿಕ್ಕುಮ್
ಪೇರಾದ ಉಳ್ಳಂ ಪೆರ ||

ಪ್ರ || ಏಯ್ನ್ದ-ಸರ್ವತ್ರ ವ್ಯಾಪಿಸಿದ, ಪೆರುಂಕೀರ್ತಿ-ಮಹಾಕೀರ್ತಿಯುಳ್ಳ, ಇರಾಮಾನುಜಮುನಿತನ್ – ಶ್ರೀರಾಮಾನುಜಯೋಗಿವರ್ಯರ, ವಾಯ್ನ್ದಮಲರ್ – ವಿಕಸಿತವಾದ ಕಮಲದಂತಿರುವ, ಪಾದಮ್-ಚರಣಯುಗಳವನ್ನು, ಆಯ್ನ್ದ-ಉತ್ಕೃಷ್ಟವಾದ, ಪೆರುಂಶೀರಾರ್-ಮಹಾಮಹಿಮೆಯುಳ್ಳ, ಶಡಕೋಪನ್-ಶ್ರೀಶಠಾರಿಯ, ಶೆನ್ದಮಿಳ್ವೇದಮ್-ದ್ರಾವಿಡವೇದವನ್ನು, ದರಿಕ್ಕುಮ್-ಧರಿಸುವಂತಹ, ಪೇರಾದ ಉಳ್ಳಮ್-ಸ್ಥಿರವಾದ ಮನಸ್ಸನ್ನು, ಪೆರ-ಹೊಂದುವುದಕ್ಕಾಗಿ, ವಣಙ್ಗುಕಿನ್ರೇನ್-ನಮಸ್ಕರಿಸುತ್ತೇನೆ.

---

ಮರ್ಮ || (೧೪) ಸರ್ವವೇದಾನ್ತಸಾರಾರ್ಥಾಃ ಪ್ರಬನ್ಧೇಽಸ್ಮಿನ್ ಪ್ರಕಾಶಿತಾಃ | ಇತಿ ವೇದ್ಮಿ ಶ್ರಿಯಃಕಾನ್ತೋ ಗೀತಾಚಾರ್ಯೋಽದ್ಯ ಕಲ್ಕಿರಾಟ್ || (೧೫) ಮುಕ್ತಯೇ ಸರ್ವಲೋಕಾನಾಂ ಜಾತಿಲಿಂಗಾದ್ಯಭೇದತಃ | ನಿರ್ಹೇತುಕ ಕೃಪಾಸಿನ್ಧುರ್ಬನ್ಧು ಸ್ಸರ್ವವಿಧೋಽಸ್ಮ್ಯಹಮ್ || (೧೬) ಷೋಡಶಸ್ತ್ರೀಸಹಸ್ರೇಶಃ ಪುರಾ ಗೋಪೀವಿಟೋಽಭವಮ್ | ಅದ್ಯಾಸ್ಮಿ ಸರ್ವಲೋಕಾನಾಂ ಪತಿರ್ಮೋಕ್ಷಪ್ರದೋ ಹರಿಃ || (೧೭) ಮಮ ಶ್ರೀಕಲ್ಕಿಸಿಂಹಸ್ಯ ಸ್ವಾತಂತ್ರ್ಯಂ ವಿದ್ಯತೇ ಹರೇಃ | ಲೋಕಾ ನಿನ್ದನ್ತು ವಾ ನನ್ದನ್ತ್ವತ್ರ ಶೈಲೀಂ ವಿಲೋಕ್ಯ ಮೇ || (೧೮) ಅವಜಾನನ್ತಿ ಮಾಂ ಮೂಢಾ ಮಾನುಷೀಂ ತನುಮಾಶ್ರಿತಮ್ | ತಥಾಽಪಿ ಜಗತಾಂ ಮೌಢ್ಯಂ ಹನ್ಮಿ! ಸತ್ಯಂ ವದೇ ಹರಿಃ ||

( ಸ-ಗಾ-ರ || )—

**ವನ್ದೇ ಪ್ರಫುಲ್ಲಪದಪಙ್ಕಜಮದ್ಯ ದಿವ್ಯಂ**
**ರಾಮಾನುಜಸ್ಯ ಮಹಿತಸ್ಯ ಮುನೇಸ್ಸುಸೇವ್ಯಮ್ |**
**ಪ್ರಾಪ್ತುಂ ಮನಸ್ಸ್ಥಿರಮಿಹ ದ್ರವಿಡಾಗಮೇಽಸ್ಮಿನ್**
**ರಮ್ಯೇ ಶಠಾರಿಸುಕವೇ ರ್ನಿರವದ್ಯಧಾಮ್ನಃ ||**

(೪) ವಾನ್ತಿಕಳುಮ್ ಶೋಲೈ ಮದಿಳರಂಗರ್ ವಣ್ಪುಕೞ್
ಮೇಲ್
ಆನ್ಱ ತಮಿೞ್ ಮಱೈಕಳಾಯಿರಮುಮ್-ಈನ್ಱ
ಮುದಲ್ತಾಯ್ ಶಡಕೋಪನ್, ಮೊಯ್ಮ್ಬಾಲ್ ವಳರ್ತ್ತ-
ಇದತ್ತಾಯಿರಾಮಾನುಜನ್.

ಪ್ರ || ವಾನ್-ಆಕಾಶದಲ್ಲಿ, ತಿಕಳುಮ್--ಪ್ರಕಾಶಿಸುವ, ಶೋಲೈ-ವೃಕ್ಷಗಳುಳ್ಳ, ಮದಿಳ್-ಪ್ರಾಕಾರಗಳೊಡನೆ ಕೂಡಿದ, ಅರಙ್ಗರ್-ಶ್ರೀರಂಗನಗರದ ಸ್ವಾಮಿಯ, ವಣ್ಪುಕೞ್ಮೇಲ್--ದಿವ್ಯಮಾಹಾತ್ಮ್ಯವನ್ನು ಕುರಿತು, ಆನ್ಱತಮಿೞ್ಮಱೈಕಳ್-ವಿರಚಿತವಾದ ದ್ರಾವಿಡವೇದರೂಪವಾದ, ಆಯಿರಮುಮ್--ಸಾವಿರಪದ್ಯಗಳುಳ್ಳ, ಈ ಪ್ರಬನ್ಧವನ್ನು, ಈನ್ಱ-ಪ್ರಸವಿಸಿದ, ಮುದಲ್ತಾಯ್-ಆದಿಜನನಿಯು, ಶಡಕೋಪನ್-ಶ್ರೀಶಠಾರಿಮುನಿಯು, ಮೊಯ್ಮ್ಬಾಲ್ವಳರ್ತ್ತ-(ಸ್ತನ್ಯವನ್ನು ಕೊಟ್ಟು) ಬೆಳೆಸಿದ, ಇದತ್ತಾಯ್-ಧಾತ್ರಿಯು (ದಾದಿಯು), ಇರಾಮಾನುಜನ್-ಶ್ರೀರಾಮಾನುಜಾರ್ಯರು.

( ಸ-ಗಾ-ರ || )—

**ಉತ್ತುಂಗವೃಕ್ಷವಲಯೇ ನಗರೇ ಚ ರಮ್ಯೇ**
**ಶ್ರೀರಂಗಭರ್ತುರಿಹ ದಿವ್ಯಯಶಃಪ್ರಶಂಸಾಮ್ |**
**ತಾಂ ದ್ರಾವಿಡಶ್ರುತಿಮಯೀಂ ತನಯಾಂ ಶಠಾರಿಃ**
**ಪ್ರಾಸೂತ ಚಾದಿಜನನೀ ! ಯತಿರಾಟ್ತು ಧಾತ್ರೀ ||**

(೫) ಮಿಕ್ಕವಿಱೈನಿಲೈಯುಮ್ ಮೆಯ್ಯಾಮುಯಿರ್ ನಿಲೈಯುಮ್,
ತಕ್ಕ ನೆಱಿಯುಮ್ ತಡೈಯಾಕಿ, ತೊಕ್ಕಿಯಲುಮ್,
ಊೞ್ವಿನೈಯುಮ್ ವಾೞ್ವಿನೈಯುಮೋದುಂ ಕುರುಕೈ
ಯರ್ಕೋನ್-ಯಾೞಿನಿಶೈ ವೇದತ್ತಿಯಲ್ ||

ಪ್ರ || ಮಿಕ್ಕ–ಅಪಾರವಾದ, ಇಱೈ–ಸರ್ವೇಶ್ವರನ, ನಿಲೈಯುಮ್ – ಮಹಾ ಸ್ವರೂಪವನ್ನೂ, ಮೆಯ್ಯಾಮ್–ಶಾಶ್ವತವಾದ, ಉಯಿರ್‌ನಿಲೈಯುಮ್–ಜೀವಾತ್ಮ ಸ್ವರೂಪವನ್ನೂ, ತಕ್ಕನೆಱಿಯುಮ್–(ಮೋಕ್ಷಕ್ಕೆ) ತಕ್ಕ ಉಪಾಯಸ್ವರೂಪವನ್ನೂ, ತಡೈಯಾಕಿ–ಪ್ರತಿಬನ್ಧಕರೂಪವಾಗಿ, ತೊಕ್ಕಿಯಲುಮ್–ಅನಾದಿಕರ್ಮರೂಪವಾದ, ಊೞ್ವಿನೈಯುಮ್ – ಮಹಾಪಾತಕರೂಪವಾದ ವಿರೋಧಿಯ ಸ್ವರೂಪವನ್ನೂ, ವಾೞ್ವಿನೈಯುಮ್ – ಮೋಕ್ಷವೆಂಬ ಆನನ್ದಮಯವಾದ ಪುರುಷಾರ್ಥದ ಸ್ವರೂಪ ವನ್ನೂ (ಈಪ್ರಕಾರ ಅರ್ಥಪಂಚಕವನ್ನೂ), ಕುರುಕೈಯರ್‌ಕೋ–ಶ್ರೀಕುರುಕಾ ಪುರಸ್ವಾಮಿಯಾದ ಶಠಾರಿಯ, ಯಾೞಿನಿಸೈ – ವೀಣಾಗಾನಸ್ವರಾನುಗುಣವಾದ, ವೇದತ್ತಿಯಲ್–ದ್ರಾವಿಡವೇದರೂಪವಾದ ದಿವ್ಯಪ್ರಬನ್ಧವು, ಓದುಮ್–ಪ್ರತಿಪಾದಿ ಸುತ್ತದೆ (ವಿವರಿಸುತ್ತದೆ).

( ಸ–ಗಾ–ರ || )—

**ಸರ್ವೇಶ್ವರಸ್ಯ ಮಹಿತಸ್ಯ ಮಹತ್ಸ್ವರೂಪಂ**
**ಜೀವಸ್ಯ ಚಾವ್ಯಯಮಿದಂ ಸದುಪಾಯರೂಪಮ್ |**
**ಪೂರ್ವಂ ಚ ದುಷ್ಕೃತಮಹೋ ! ಪ್ರತಿಬನ್ಧರೂಪಂ**
**ಮೋಕ್ಷಂ ಚ ವಕ್ತಿ ನಿಗಮಃ ಕುರುಕೇಶಗೀತಃ ||**

॥ ಶ್ರೀಃ ॥

# ತಿರುವಾಯ್ಮೊಳಿ.

## ಪ್ರಥಮ ಶತಕದಲ್ಲಿ ಪ್ರಥಮ ದಶಕ.

**(ಉಯರ್ವಱವುಯರ್ ನಲಮ್)**

॥೧॥ ಉಯರ್ವಱರ ವುಯರ್ನಲಮುಡೈಯವನ್ ಯವನವನ್,
ಮಯರ್ವಱರ ಮದಿನಲಮರುಳಿನನ್ ಯವನವನ್,
ಅಯರ್ವಱರು ಮಮರರ್ಕಳದಿಪತಿ ಯವನವನ್,
ತುಯರರು ಶುಡರಡಿ ತೊಳುದೆಳೆನ್ ಮನನೇ ॥

ಶ್ರೀಮದ್ಭಿಃ ಕಲ್ಕಿನೃಸಿಂಹಾರ್ಯೈಃ ಪ್ರತಿವಾದಿ ಭಯಙ್ಕರೈಃ ।
ಸಹಸ್ರಗಾಥಾವ್ಯಾಖ್ಯಾನಂ ಕುರ್ವೇ ಕರ್ಣಾಟಭಾಷಯಾ ॥ ॥ ೧ ॥

ಅತ್ರ ಪ್ರತಿಪದಾರ್ಥಸ್ತು ಪ್ರಥಮಂ ಪ್ರತಿಪಾದ್ಯತೇ ।
ಸಹಸ್ರಗಾಥಾರತ್ನಾವಳ್ಯಾಖ್ಯಾ ವ್ಯಾಖ್ಯಾ ತತಃ ಪರಮ್ ॥ ॥ ೨ ॥

ಅನನ್ತರಂ ಚ ಕರ್ಣಾಟವಾಣ್ಯಾ ತಾತ್ಪರ್ಯಮುಚ್ಯತೇ ।
ಏವಂ ತ್ರಿವಿಧಮಪ್ಯಸ್ತಿ ಲೋಕಾನಾಮುಪಕಾರಕಮ್ ॥ ॥ ೩ ॥

ಕರ್ಣಾಟಮಣ್ಡಲೇಽತ್ರಾದ್ಯ ದ್ರಾವಿಡಜ್ಞಾ ವಿಶೇಷತಃ ।
ದುರ್ಲಭಾ ಏವ! ಸರ್ವೇಷಾಂ ವ್ಯಾಖ್ಯೇಯಮುಪಕಾರಿಣೀ ॥ ॥ ೪ ॥

ಸನ್ತಸ್ಸಹೃದಯಾಸ್ಸನ್ತಿ ಪುರುಷಾ ರನೇಕಗಣಾಃ ।
ಗುಣಜ್ಞಾ ಮಮ ಭಕ್ತ್ಯಾ ಇತ್ಯುದ್ಯಮೋಽಯಂ ಹರೇರ್ಮಮ ॥ ॥ ೫ ॥

ಶಠಾರೇರ್ನಾಯಿಕಾತ್ವಂ ಹಿ ಸಮ್ಯಗತ್ರ ಪ್ರಕಾಶ್ಯತೇ ।
ಶೃಂಗಾರರಸಸಾರಜ್ಞಾಸ್ಸನ್ತು ಲೋಕಾ ಮಮ ಪ್ರಿಯಾಃ ॥ ॥ ೬ ॥

ಪ್ರ॥ ಎನ್ ಮನನೇ–ನನ್ನ ಮನಸ್ಸೇ, ಉಯರ್ವುಱ–(ಇತರರ) ಉಚ್ಛ್ರಾಯವು, ಅಱ–ನಶಿಸುವಂತೆ, ಉಯರ್ – (ವಾಕ್ಕಿಗೂ, ಮನಸ್ಸಿಗೂ–ಗೋಚರವಾಗದಂತೆ) ಉಚ್ಛ್ರಾಯವನ್ನು ಪಡೆದ, ನಲಮ್–ಆನನ್ದವನ್ನು, ಉಡೈಯವನ್–ಪಡೆದಿರುವವನು, ಯವನ್–ಯಾರೋ, ಅವನ್–ಆ (ಪುರಾಣಪ್ರಸಿದ್ಧನಾದ) ಭಗವನ್ತನ; ಮಯರ್ವುಱ–ಅಜ್ಞಾನವು, ಅಱ–ನಶಿಸುವಂತೆ, ಮದಿನಲಮ್–ಜ್ಞಾನಭಕ್ತಿಗಳನ್ನು, ಅರುಳಿನನ್–(ತನ್ನ ಕಾರುಣ್ಯದಿಂದ) ಅನುಗ್ರಹಿಸಿದವನು, ಯವನ್–ಯಾವನೋ, ಅವನ್–ಅವನ;

ಅಯುವುಱ ಅರುಮ್–ವಿಸ್ಮೃತಿಯಿಲ್ಲದ, ಅಮರರ್‌ಕಳ್–ನಿತ್ಯಸೂರಿಗಳಿಗೆ, ಅಧಿಪತಿ–ನಾಯಕನಾದವನು, ಯರ್ವ – ಯಾವನೋ, ಅರ್ವ–ಅವನ ; ತುಯರ್–ದುಃಖವನ್ನು, ಅರು – ಧ್ವಂಸಮಾಡತಕ್ಕ, ಶುಡರ್ – (ನಿತ್ಯವಾದ ದಿವ್ಯ) ತೇಜಸ್ಸುಳ್ಳ, ಅಡಿ–ಪಾದಗಳನ್ನು, ತೊಳುದು – (ಮನೋವಾಕ್ಕಾಯಗಳಿಂದ) ಭಜಿಸಿ, ಎಳು–ಉಜ್ಜೀವಿಸು.

( ಸ–ಗಾ–ರ || )—

**ಶ್ರೀಮಾನಸ್ತ್ಯಪ್ರಮೇಯೋ ನಿರತಿಶಯಮಹಾನನ್ದಮೂರ್ತಿಃ ಪ್ರಭಾವಾ-**
**ದಜ್ಞಾನಧ್ವಾನ್ತಭಾನುರ್ಮತಿವಿನತಿಕರೋ ನಿತ್ಯಸೂರೀನ್ದ್ರಸೇವ್ಯಃ |**
**ಜ್ಯೋತಿಸ್ತತ್ತ್ವಂ ಪರಂ ತತ್ಸಕಲಜನಿಜುಷಾಂ ಸರ್ವಸನ್ತಾಪಹಾರಿ**
**ಶ್ರೀಶಸ್ಯಾಸ್ಯೈವ ಪಾದಾಮ್ಬುಜಯುಗಳಮಹೋ! ಮಾನಸ! ತ್ವಂ ಭಜೇಥಾಃ||**

(ತಾತ್ಪರ್ಯ)—ಎಲೈ (ನನ್ನ) ಮನಸ್ಸೇ ! ಅಪ್ರಮೇಯವಾದ ಮಾಹಾತ್ಮ್ಯವುಳ್ಳ, ನಿರತಿಶಯಾನನ್ದಮೂರ್ತಿಯಾಗಿಯೂ, ಅಜ್ಞಾನಾನ್ಧಕಾರಧ್ವಂಸಕನಾಗಿ ದಿವ್ಯತೇಜಃಪ್ರಭಾವದಿಂದ ಚೇತನರಿಗೆ ಜ್ಞಾನಭಕ್ತ್ಯಾದಿಗಳನ್ನು ಅನುಗ್ರಹಿಸುವವನಾಗಿಯೂ, ವಿಸ್ಮೃತಿ (ಜ್ಞಾನಸಂಕೋಚ) ಲೇಶವೂ ಇಲ್ಲದ ದಿವ್ಯಜ್ಞಾನವುಳ್ಳ ನಿತ್ಯಸೂರಿಗಳಿಗೆ ನಾಯಕನಾಗಿಯೂ ಇರುವ ಪರಂತತ್ತ್ವಂ–ಪರಂಜ್ಯೋತಿಃ–ಎಂದು ಪ್ರಸಿದ್ಧನಾದ ಶ್ರಿಯಃಪತಿಯಾದ ಭಗವನ್ತನ ಸರ್ವಚೇತನ ಸನ್ತಾಪಹರವಾದ ಪಾದಾರವಿನ್ದಗಳನ್ನೇ ಭಜಿಸಿ ಉಜ್ಜೀವಿಸು.

||೨|| ಮನನಕಮಲಮಱ ಮಲರ್‌ಮಿಶೈ ಯೆಳುತರುಮ್,
ಮನನುಣರ್‌ವಳವಿಲ್ಲ ಪೊರಿಯುಣರ್ವವೈಯಿಲನ್,
ಇನನುಣರ್‌ಮುಳುನಲ ಮೆದಿರ್ ನಿಕಳ್ ಕಳಿವಿನುಮ್,
ಇನನಿಲನೆನನುಯಿರ್ ಮಿಕುನರೈಯಿಲನೇ ||

ಪ್ರ|| ಮನನಕಮ್–ಮನಸ್ಸಿನಲ್ಲಿ, ಮಲಮ್–ಮಾಲಿನ್ಯವು, ಅಱ – ನಶಿಸುವಂತೆ, ಮಲರ್–ವಿಕಾಸವುಂಟಾಗಿ, ಮಿಶೈ–ಮೇಲೆ, ಎಳುತರುಮ್–ಬೆಳೆಯುವಂತಹ, ಮನ ಉಣರ್ವು–ಮನಸ್ಸಿನ ಜ್ಞಾನಪ್ರಕಾಶರೂಪವಾದ ಯೋಗಧ್ಯಾನದಿಂದಲೂ, ಅಳವು ಇಲನ್–(ಜೀವಾತ್ಮನಂತೆ) ಅರಿಯುವುದಕ್ಕೆ ಅಶಕ್ಯನಾಗಿಯೂ, ಪೊರಿಉಣರ್ವು ಅವೈ ಇಲನ್–ಇನ್ದ್ರಿಯಜ್ಞಾನಕ್ಕೆ ವಿಷಯವಾದ ಜಡವಸ್ತುಗಳಿಗಿಂತ ಬೇರೆಯಾದವನಾಗಿಯೂ, ಇನನ್ (ಇನ್ನನ್) – ಈಪ್ರಕಾರ ಚಿದಚಿದ್ವಿಲಕ್ಷಣನಾಗಿಯೂ, ಮುಳು ಉಣರ್‌ನಲಮ್ – ಪೂರ್ಣಜ್ಞಾನಾನನ್ದನಿಧಿಯಾಗಿಯೂ, ಎದಿರ್–ಭವಿಷ್ಯತ್ಕಾಲ

ದಲ್ಲೂ, ನಿಕೞ್ವ್-ವರ್ತಮಾನಕಾಲದಲ್ಲೂ, ಕೞಿವಿನುಮ್-ಭೂತಕಾಲದಲ್ಲೂ, ಇಣೈ ಇಲನ್-ತನಗೆ ಸಮಾನರಿಲ್ಲದವನಾಗಿಯೂ, ಮಿಕು ನರೈ ಇಲನೇ-ತನಗೆ ಮೇಲಾದವರಿಲ್ಲದವನಾಗಿಯೂ ಇರುವ ಭಗವನ್ತನೇ, ಎನ್ ನನ್ ಉಯಿರ್-ನನ್ನ ಶ್ಲಾಘ್ಯನಾದ ಧಾರಕ (ಅನ್ತರಾತ್ಮ) ನಾಗಿದಾನೆ.

( ಸ-ಗಾ-ರ ॥ )—

**ಮಾಲಿನ್ಯಂ ಮನಸಃ ಪ್ರಶತ್ಯ ಸಕಲಂ ನಿತ್ಯಪ್ರಬುದ್ಧೋಜ್ಜ್ವಲಾ-**
**ದ್ಯೋಗಧ್ಯಾನಬಲಾತ್ಪ್ರಮಾತುಮಪಿ ಯಶ್ಶಕ್ಯೋ ನ ಚಾನ್ಯೇನ್ದ್ರಿಯೈಃ।**
**ಏವಂ ಯಶ್ಚಿದಚಿದ್ವಿಲಕ್ಷಣತಯಾ ಭಾತಿ ತ್ರಿಕಾಲೇಷ್ವಪಿ**
**ಜ್ಞಾನಾನನ್ದನಿಧಿಸ್ಸಮಾಧಿಕದರಿದ್ರೋಽಯಂ ಕಿಲಾತ್ಮಾ ಮಮ ॥**

ತಾ॥ ಮನಸ್ಸಿನ ಮಾಲಿನ್ಯವನ್ನೆಲ್ಲಾ ನಾಶಪಡಿಸುವಂತಹ ನಿತ್ಯಪ್ರಬುದ್ಧವಾಗಿ ಪ್ರಕಾಶಿಸುತ್ತಿರುವ ಯೋಗಧ್ಯಾನಬಲದಿಂದಲೂ ಇತರೇನ್ದ್ರಿಯಗಳಿಂದಲೂ ಕೂಡ ಈತ್ವನೆಂದು ಗ್ರಹಿಸುವುದಕ್ಕೆ ಅಶಕ್ಯನಾಗಿ ಚಿದಚಿದ್ವಿಲಕ್ಷಣನಾಗಿಯೂ, ಜ್ಞಾನಾನನ್ದನಿಧಿಯಾಗಿಯೂ, ಕಾಲತ್ರಯದಲ್ಲಿಯೂ ತನಗೆ ಸಮಾನರಾಗಲೀ ಮೇಲ್ಪಟ್ಟವರಾಗಲೀ ಇಲ್ಲದವನಾಗಿಯೂ ಇರುವ ಭಗವನ್ತನೇ ಉತ್ಕೃಷ್ಟನಾದ ನನ್ನ ಅನ್ತರಾತ್ಮನು.

॥೩॥ ಇಲನದು ಉಡೈಯನಿದೆನ ನಿನೈವರಿಯವನ್,
ನಿಲನಿಡೈ ವಿಶುಮ್ಬಿಡೈ ಯುರುವಿನ ನರುವಿನನ್,
ಪುಲನೊಡು ಪುಲನಲನೊೞಿವಿಲನ್ ಪರನ್ದ, ಅನ್
ನಲನುಡೈ ಯೊರುವನೈ ನಣುಕಿನಮ್ ನಾಮೇ ॥

ಪ್ರ॥ ಅದು ಇಲನ್-ಆ ವಸ್ತುವಿಲ್ಲದವನು, ಇದು ಉಡೈಯನ್-ಈ ವಸ್ತುವುಳ್ಳವನು, ಎನ-ಎಂದು, ನಿನೈವು ಅರಿಯವನ್-ಚಿಂತಿಸಲಶಕ್ಯನಾದವನೂ, ನಿಲನಿಡೈ-ಭೂಮಿಯಲ್ಲೂ, ವಿಶುಮ್ಬಿಡೈ-ಊರ್ಧ್ವಲೋಕದಲ್ಲೂ, ಉರುವಿನನ್-ರೂಪವುಳ್ಳ ಜಡವಸ್ತುಗಳುಳ್ಳವನೂ, ಅರುವಿನನ್-ರೂಪವಿಲ್ಲದ ಚಿದ್ವಸ್ತುಗಳುಳ್ಳವನೂ, ಪುಲನೊಡು-ಬಾಹ್ಯವಸ್ತುಗಳೊಡನೆ ಕೂಡಿದವನೂ, ಪುಲನಲನ್-ಬಾಹ್ಯವಸ್ತು ವ್ಯತಿರಿಕ್ತನೂ ಆಗಿ, ಒೞಿವಿಲನ್ ಪರನ್ದ-ಒಂದು ವಸ್ತುವನ್ನೂ ಬಿಡದಂತೆ ವ್ಯಾಪಿಸಿರುವ, ಅನ್ ನಲನುಡೈ-ಆ ಮಹಾನನ್ದವುಳ್ಳ, ಒರುವನೈ-ಅದ್ವಿತೀಯನಾದವನನ್ನು, ನಾಮ್ ನಣುಕಿನಮ್-ನಾವು ಭಜಿಸಿದೆವು.

( ಸ-ಗಾ-ರ || )—

**ತಸ್ಯಾಯಂ ಪ್ರಭುರಸ್ತಿ! ನಾಸ್ಯ ತು ಕಿಲೇತ್ಯೇವಂ ನ ವಕ್ತುಂ ಸ್ವಯಂ**
**ಶಕ್ಯೋ ಯಃ! ಪೃಥಿವೀತಲೇ ಚ ಗಗನೇ ಯದ್ರೂಪ್ಯರೂಪ್ಯಸ್ತಿ ಚ|**
**ತತ್ಸರ್ವಂ ಚ ಜಡಾಜಡಂ ವಹತಿ ಯಸ್ಸಂಯುಕ್ತ ಏವಾಖಿಲೈ-**
**ಸ್ಸತ್ಯಂ ಭಾತಿ ಪೃಥಕ್ಚ! ವಿಷ್ಣುಮಮಿತಾನನ್ದಂ ತಮೇಕಂ ನುಮಃ ||**

ತಾ|| ಆ ವಸ್ತುವುಳ್ಳವನು, ಈ ವಸ್ತುವಿಲ್ಲದವನೆಂದು ಚಿಂತಿಸಲಶಕ್ಯನಾಗಿಯೂ, ಭೂಲೋಕದಲ್ಲೂ ಊರ್ಧ್ವಲೋಕದಲ್ಲೂ ರೂಪಸಹಿತವಾದ ಜಡವಸ್ತುಗಳನ್ನೂ ರೂಪರಹಿತವಾದ ಚಿದ್ವಸ್ತುಗಳನ್ನೂ ಉಳ್ಳವನಾಗಿಯೂ, ಬಾಹ್ಯವಸ್ತುಗಳೊಡನೆ ಕೂಡಿದವನಾಗಿಯೂ, ಬಾಹ್ಯವಸ್ತು ವ್ಯತಿರಿಕ್ತನಾಗಿಯೂ, ಸರ್ವವ್ಯಾಪಿಯಾಗಿಯೂ, ನಿರತಿಶಯಾನನ್ದಸ್ವರೂಪಿಯಾಗಿಯೂ—ಅದ್ವಿತೀಯನಾಗಿರುವ ಆ ಭಗವನ್ತನನ್ನು ನಾವು ಭಜಿಸಿದೆವು.

(೪) ನಾಮವನಿವನುವನವಳಿವಳುವಳೆವಳ್,
ತಾಮವರಿವರುವರದು ವಿದು ವುದು ವೆದು,
ವೀಮವೈಯಿವೈಯುವೈ ಯವೈನಲನ್ತೀಙ್ಗವೈ,
ಆಮವೈಯಾಯವೈಯಾಯ್ ನಿನ್ಱವರೇ.

ಪ್ರ|| ನಾಮ್–ನಾವು, ಅವನ್–ದೂರದಲ್ಲಿರುವವನು, ಇವನ್–ಸಮೀಪದಲ್ಲಿರುವವನು, ಉವನ್ – ಮಧ್ಯದಲ್ಲಿರುವವನು, ಅವಳ್–ದೂರದಲ್ಲಿರುವವಳು, ಇವಳ್–ಸಮೀಪದಲ್ಲಿರುವವಳು, ಉವಳ್–ಮಧ್ಯದಲ್ಲಿರುವವಳು, ಎವಳ್–ಪ್ರಶ್ನೆಗೆ ಆಸ್ಪದವಾದವಳು, ತಾಮ್–ತಾವು, ಅವರ್–ದೂರದಲ್ಲಿರುವವರು, ಇವರ್–ಸಮೀಪದಲ್ಲಿರುವವರು, ಉವರ್–ಮಧ್ಯದಲ್ಲಿರುವವರು, ಅದು–ದೂರದಲ್ಲಿರುವ ವಸ್ತುವು, ಇದು–ಸಮೀಪದಲ್ಲಿರುವ ವಸ್ತುವು, ಉದು–ಮಧ್ಯದಲ್ಲಿರುವ ವಸ್ತುವು, ಎದು–ಪ್ರಶ್ನಾಸ್ಪದ ವಸ್ತುವು, ವೀಮ್ ಅವೈ–ನಾಶಹೊಂದುವ ವಸ್ತುಗಳು, ಇವೈ–ಈ ವಸ್ತುಗಳು, ಉವೈ–ಮಧ್ಯದಲ್ಲಿರುವ ವಸ್ತುಗಳು, ಅವೈ – ಆ ವಸ್ತುಗಳು, ನಲಮ್–ಒಳ್ಳೆಯ ವಸ್ತುಗಳು, ತೀಙ್ಗು ಅವೈ–ಕೆಟ್ಟ ವಸ್ತುಗಳು, ಆಮ್ ಅವೈ–ಭವಿಷ್ಯದ್ವಸ್ತುಗಳು, ಆಯವೈ–ಭೂತಕಾಲ ವಸ್ತುಗಳು, (ಈ ಎಲ್ಲಾ ವಸ್ತುಗಳೂ); ಆಯ್ ನಿನ್ಱ–ಈ ಎಲ್ಲಾ ವಸ್ತುಗಳನ್ನೂ ಪಡೆದು ಅವುಗಳೊಳಗೆ ನಿಂತಿರುವ, ಅವರೇ–ಆ ಸರ್ವೇಶ್ವರನೇ!

( ಸ-ಗಾ-ರ || )—

**ಸರ್ವಂ ಭಾತಿ ಸ ಏವ ಯದ್ವಯಮಸಾವೇಷೋಽಪ್ಯಯಂ ಸಾ ಸ್ವಯಂ**
**ಚೈಷೇಯಂ ಕಿಲ ಕಾಽಪಿ ಚ ಸ್ವಯಮಮೀ ತೇಽಪೀತಿ ಚೇಮೇ ತಥಾ |**
**ತಚ್ಚೇದಂ ಯದದಶ್ಚ ಕಿಂಚ ಸಕಲಂ ಯನ್ನಶ್ವರಾಣ್ಯಪ್ಯಹೋ !**
**ತಾನೀಮಾನಿ ತಥಾಽಪ್ಯಮೂನಿ ಸದಸದ್ವಸ್ತೂನಿ ಭಾವ್ಯಾಗತಮ್ ||**

ತಾ|| (ಸಕಲ ಚೇತನಾಚೇತನ ಪ್ರಪಂಚಾತ್ಮಕನೂ ಸರ್ವೇಶ್ವರನೇ ಎಂದು ಶರೀರ ಶರೀರಿಭಾವದಿಂದ ಇಲ್ಲಿ ಪ್ರತಿಪಾದಿಸಲ್ಪಡುತ್ತದೆ.) ನಾವು, ಅವನು, ಇವನು, ಮಧ್ಯದಲ್ಲಿರುವವನು; ಅವಳು, ಇವಳು, ಮಧ್ಯದಲ್ಲಿರುವವಳು; ಯಾವಳು, ತಾವು, ಅವರು, ಇವರು, ಮಧ್ಯದಲ್ಲಿರುವವರು ; ಅದು, ಇದು, ಮಧ್ಯದಲ್ಲಿರುವುದು ಯಾವುದು, ವಿನಾಶಿವಸ್ತುಗಳು, ಈ ವಸ್ತುಗಳು, ಮಧ್ಯವಸ್ತುಗಳು, ಆ ವಸ್ತುಗಳು, ಒಳ್ಳೆಯ ವಸ್ತುಗಳು, ಕೆಟ್ಟವಸ್ತುಗಳು, ಬರುವುವು, ಅತೀತವು-ಇತ್ಯಾದಿ ಸರ್ವವಸ್ತುಗಳನ್ನೂ ಪಡೆದು ಅವುಗಳೊಳು ನಿಂತಿರುವವನು ಆ ಸರ್ವೇಶ್ವರನೇ !

(೫) ಅವರವರ್ ತಮತಮ ದಱಿವಱಿ ವಕೈವಕೈ,
ಅವರವರಿಱೈಯವರೆನ ವಡಿಯಡೈವರ್ಕಳ್,
ಅವರವರಿಱೈಯವರ್ ಕುಱೈವಿಲರಿಱೈಯವರ್,
ಅವರವರ್ ವಿದಿವೞಿಯಡೈಯ ನಿನ್ಱನರೇ.

ಪ್ರ|| ಅವರವರ್-ಆಯಾ ಅಧಿಕಾರಿಗಳು, ತಮತಮದು-ತಮ್ಮ ತಮ್ಮ ಅಱಿವು ಅಱಿ-ಜ್ಞಾನದಿಂದ ತಿಳದ, ವಕೈವಕೈ-ನಾನಾ ಪ್ರಕಾರಗಳಿಂದ, ಅವರ್ ಅವರ್-ಆಯಾ ದೇವತೆಗಳನ್ನು, ಇಱೈಯವರ್ ಎನ-(ಫಲಪ್ರದರಾದ) ಸ್ವಾಮಿಗಳೆಂದು (ಭಾವಿಸಿ), ಅಡಿ ಅಡೈವರ್ಕಳ್-(ಆಯಾ ದೇವತೆಗಳ) ಪಾದಗಳನ್ನು ಆಶ್ರಯಿಸುವರು; ಅವರ್ ಅವರ್-ಆಯಾ ಅಧಿಕಾರಿಗಳ, ಇಱೈಯವರ್-ಸ್ವಾಮಿಗಳಾದ ಆ ದೇವತೆಗಳು, ಕುಱೈವು ಇಲರ್-ಕೊರತೆಯಿಲ್ಲದವರು. ಇಱೈಯವರ್-ಸರ್ವೇಶ್ವರನು, ಅವರವರ್-ಆಯಾ ಅಧಿಕಾರಿಗಳು, ವಿದಿವೞಿ-ಕರ್ಮಾನುಸಾರವಾಗಿ, ಅಡೈಯ-ಫಲವನ್ನು ಹೊಂದುವಂತೆ, ನಿನ್ಱನರ್-(ಆಯಾ ದೇವತೆಗಳಿಗೆ ಅನ್ತರ್ಯಾಮಿಯಾಗಿ) ನಿಂತಿರುವವನು.

( ಸ-ಗಾ-ರ || )—

**ತೇ ತೇ ಸ್ವಸ್ವಮತಿಸ್ವಭಾವಮನುಸೃತ್ಯೈವೇಷ್ಟದೇವಾನ್ಸುಗಾಃ**
**ನಾನಾಸಾಧನಸಂಯುತಾಃ ಕಿಲ ! ತಥಾ ದೇವಾಶ್ಚ ತೇಽಪೀಶ್ವರಾಃ |**
**ತೇಷಾಮೀಶ್ವರ ಏವ ಸರ್ವಜಗತಾಮನ್ತರ್ನಿಯನ್ತಾ ಸ್ವಯಂ**
**ವಿಷ್ಣುರ್ಭಾತಿ ಫಲಪ್ರದೋಽತ್ರ ಸತತಂ ಕರ್ಮಾನುಸಾರೇಣ ಚ ||**

ತಾ|| ಆಯಾ ಜನರು (ಅಧಿಕಾರಿಗಳು) ತಮ್ಮ ತಮ್ಮ ಜ್ಞಾನಕ್ಕೆ ಅನುಗುಣವಾದ ಸಾಧನಗಳಿಂದ ಆಯಾ ಇಷ್ಟದೇವತೆಗಳನ್ನು (ಫಲಪ್ರದರೆಂದು ಭಾವಿಸಿ) ಭಜಿಸುತ್ತಾರೆ. ಆಯಾ ದೇವತೆಗಳೂ ಕೂಡ (ಸರ್ವೇಶ್ವರನ ಅನುಗ್ರಹದಿಂದ) ಕೊರತೆಯಿಲ್ಲದವರಾಗಿಯೇ ಇರುತ್ತಾರೆ. ಸರ್ವಲೋಕೇಶ್ವರನಾದ ಭಗವನ್ತನು ಸಕಲ ಚೇತನರಿಗೂ ಅವರವರ ಕರ್ಮಾನುಗುಣವಾಗಿ ಫಲಪ್ರದಾನ ಮಾಡಲು ಆಯಾ ದೇವತೆಗಳಿಗೆ ಅನ್ತರ್ಯಾಮಿಯಾಗಿಯೂ ನಿಂತಿರುವನು.

(೮) ನಿನ್ಱನರಿರುನ್ದನರ್ ಕಿಡನ್ದನರ್ ತಿರಿನ್ದನರ್;
ನಿನ್ಱಿಲರಿರುನ್ದಿಲರ್ ಕಿಡನ್ದಿಲರ್ ತಿರಿನ್ದಿಲರ್;
ಎನ್ಱುಮೋರಿಯಲ್ವಿನರೆನ ನಿನೈವರಿಯವರ್,
ಎನ್ಱುಮೋರಿಯಲ್ವೊಡು ನಿನ್ಱವೆನ್ದಿಡರೇ.

ಪ್ರ|| ನಿನ್ಱನರ್-ನಿಂತಿದ್ದವರು, ಇರುನ್ದನರ್-ಕುಳಿತಿದ್ದವರು, ಕಿಡನ್ದನರ್-ಮಲಗಿದ್ದವರು, ತಿರಿನ್ದನರ್-ಸಂಚರಿಸುತ್ತಿದ್ದವರು; ನಿನ್ಱಿಲರ್-ನಿಂತಿಲ್ಲ, ಇರುನ್ದಿಲರ್-ಕುಳಿತಿಲ್ಲ, ಕಿಡನ್ದಿಲರ್-ಮಲಗಿಲ್ಲ, ತಿರಿನ್ದಿಲರ್-ಸಂಚರಿಸುತ್ತಿಲ್ಲ; ಎನ್ಱುಮ್-ಯಾವಾಗಲೂ, ಓರ್ ಇಯಲ್ವಿನರ್-ಒಂದೇ ಸ್ವಭಾವವುಳ್ಳವರು, ಎನ-ಎಂದು, ನಿನೈವು ಅರಿಯವರ್-ಚಿಂತಿಸಲು ಅಶಕ್ಯರಾದವರು; (ಯಾವಾಗಲೂ ಒಂದೇ ಸ್ವಭಾವವುಳ್ಳವರು ಯಾರೆಂದರೆ-) ಎನ್ಱುಮ್-ಎಂದಿಗೂ, ಓರ್ ಇಯಲ್ವೊಡು-ಒಂದೇ ಸ್ವಭಾವದೊಡನೆ ಕೂಡಿ, ನಿನ್ಱ-ನಿಂತಿರುವ, ಎಮ್-ನಮ್ಮ, ತಿಡರ್-(ವೇದಪ್ರಮಾಣಾದಿಗಳಿಂದ ಸಿದ್ಧವಾದ) ದೃಢಸ್ವಭಾವವುಳ್ಳ ಸರ್ವೇಶ್ವರನು!

( ಸ-ಗಾ-ರ || )—

**ತಿಷ್ಠನ್ತೋಽಪ್ಯುಪವೇಶಿನೋಽಪಿ ಶಯಿತಾಸ್ಸಂಚಾರಶೀಲಾಶ್ಚ ತೇ**
**ನೋತ್ತಿಷ್ಠನ್ತಿ ಚ ನೋಪವೇಶಿನ ಇಮೇ ಸುಪ್ತಾ ನ ಸಂಚಾರಿಣಃ |**
**ಏವಂ ನೈಕವಿಧಸ್ವಭಾವಸಹಿತಾಸ್ಸರ್ವೇಶ್ವರೋ ಭಾತ್ಯಹೋ !**
**ನಿತ್ಯಂ ತ್ವೇಕವಿಧಸ್ವಭಾವ ಇತಿ ಯತ್ಸತ್ಯಂ ಪ್ರಮಾಣೈಸ್ಸ್ಥಿರೈಃ ||**

ತಾ॥ (ಯಾವಲೋಕಗಳಲ್ಲಿಯೂ) ನಿಂತಿದ್ದವರು, ಕುಳಿತಿದ್ದವರು, ಮಲಗಿದ್ದವರು, ಸಂಚರಿಸುತ್ತಿದ್ದವರು—(ಒಂದೇರೀತಿಯಲ್ಲಿ) ನಿಂತಿಲ್ಲ, ಕುಳಿತಿಲ್ಲ, ಮಲಗಿಲ್ಲ, ಸಂಚರಿಸುತ್ತಿಲ್ಲ. ಈ ಪ್ರಕಾರ ಅವರವರು ಎಲ್ಲರೂ ಒಂದೇ ಸ್ವಭಾವವಿಲ್ಲದವರಾಗಿರುತ್ತಾರೆ. ನಮ್ಮ ಸರ್ವೇಶ್ವರನೋ ಎಂದರೆ, ನಿತ್ಯನೂ ಒಂದೇ ಸ್ವಭಾವವುಳ್ಳವನಾಗಿ (ಏಕರೂಪನಾಗಿ) ಪ್ರಕಾಶಿಸುತ್ತಿದಾನೆಂಬುದು ಸಕಲ ವೇದವೇದಾನ್ತಾದಿ ಪ್ರಮಾಣಗಳಿಂದ ಸಿದ್ಧವಾಗಿದೆ.

(೭) ತಿಡವಿಶುಮ್ಬೆರಿವಳಿ ನೀರ್ನಿಲಮಿವೈಮಿಶೈ,
ಪಡರ್ಪೊರುಳ್ ಮುಳುವದುಮಾಯವೈಯವೈತೊಱುಮ್,
ಉಡಲ್ಮಿಶೈಯುಯಿರೆನಕ್ಕರನ್ದೆಙ್ಗುಂ ಪರನ್ದುಳನ್,
ಶುಡರ್ಮಿಗು ಶುರುದಿಯುಳಿವೈಯುಣ್ಡ ಶುರನೇ.

ಪ್ರ॥ ತಿಡಮ್-ದೃಢವಾದ, ವಿಶುಮ್ಬು-ಆಕಾಶವು, ಎರಿ-ಅಗ್ನಿಯು, ವಳಿ-ವಾಯುವು, ನೀರ್-ಜಲವು, ನಿಲಮ್-ಭೂಮಿಯು, ಇವೈಮಿಶೈ-ಇವುಗಳಮೇಲೆ, ಪಡರ್-ವಿಸ್ತೃತವಾದ, ಪೊರುಳ್ ಮುಳುವದುಮ್-ವಸ್ತುಗಳೆಲ್ಲವೂ, ಆಯ್-ಆಗಿ (ನಿಂತು); ಅವೈ ಅವೈತೊಱುಮ್-ಆಯಾ ವಸ್ತುಗಳೊಳಗೆಲ್ಲಾ, ಉಡಲ್ಮಿಶೈ-ಶರೀರಗಳೊಳು, ಉಯಿರ್ ಎನ-ಆತ್ಮ (ಮರೆಸಿಕೊಂಡು) ನಿಂತಿರುವಂತೆ, ಕರನ್ದು-ಮರೆಸಿಕೊಂಡು (ಗುಪ್ತನಾಗಿನಿಂತು), ಎಙ್ಗುಮ್-ಎಲ್ಲಾಕಡೆಗಳಲ್ಲಿಯೂ, ಪರನ್ದು-(ಸಮವಾಗಿ) ವ್ಯಾಪಿಸಿ, ಇವೈ-ಈ ವಸ್ತುಗಳನ್ನೆಲ್ಲಾ, ಉಣ್ಡ-ಭಕ್ಷಿಸಿ (ರಕ್ಷಿಸಿ)ದ, ಶುರನೇ-ದೇವನೇ, ಶುಡರ್ಮಿಗು-ತೇಜಸ್ಸಿನಿಂದ ಅತಿಶಯಿತವಾದ, ಶುರುದಿಯುಳ್-ವೇದಗಳಲ್ಲಿ, ಉಳನ್-(ಸಂಕೀರ್ತಿತನಾಗಿ) ಇರುವವನು.

( ಸ-ಗಾ-ರ ॥ )—

ಆಕಾಶಾಗ್ನ್ಯನಿಲೋದಕಾವನಿತಲೇಷ್ವೇತೇಷು ವಿಸ್ತಾರಿಣಾಂ
ವಸ್ತೂನಾಂ ಚ ಪೃಥಕ್ಸ್ವರೂಪಮಖಿಲಂ ಪ್ರಾಪ್ಯಾಪಿ ಶಾನ್ತಸ್ಸ್ಥಿತಃ।
ಆತ್ಮಾ ತೇಷು ಚ ವಸ್ತುಷು ಸ್ವಗುಣಮಂಗಂ ಗುಪ್ತೋಽಭಿತಸ್ಸರ್ವಗ-
ಸ್ಸರ್ವಾನ್ಯತ್ತಿ ಚ ದೇವ ಏವ ಹಿ ಪರಂ ಜ್ಯೋತಿಶ್ಶ್ರುತಿಖ್ಯಾಪಿತಃ ॥

ತಾ॥ ಸರ್ವೇಶ್ವರನೇ (ಸೃಷ್ಟಿಕಾಲದಲ್ಲಿ) ಆಕಾಶ, ಅಗ್ನಿ, ವಾಯು, ಜಲ, ಭೂಮಿ—ಎಂಬೀ ಪಂಚಭೂತಗಳೊಳು ವ್ಯಾಪಿಸಿರುವ ಸಕಲ ಪದಾರ್ಥಗಳೂ ತಾನೇ ಆಗಿನಿಂತು, (ಸ್ಥಿತಿಕಾಲದಲ್ಲಿ) ಆ ವಸ್ತುಗಳಲ್ಲೆಲ್ಲಾ ಆತ್ಮಭೂತನಾಗಿ ಅನ್ತರ್ಗುಪ್ತನಾಗಿ ಸರ್ವತ್ರ ವ್ಯಾಪಿಸಿ, (ಪ್ರಳಯಕಾಲದಲ್ಲಿ) ಅವುಗಳನ್ನೆಲ್ಲಾ ತಾನೇ ಭಕ್ಷಿಸಿ

ತನ್ನ ಉದರದಲ್ಲಿ ರಕ್ಷಿಸುವ ಸರ್ವದೇವಾಧಿದೇವನು. ಇವನೇ ದಿವ್ಯತೇಜಃ ಪ್ರಕಾಶವುಳ್ಳ ವೇದವೇದಾನ್ತಾದಿಶಾಸ್ತ್ರಗಳಲ್ಲಿ ಪ್ರತಿಪಾದಿಸಲ್ಪಟ್ಟಿರುವವನು.

(೮) ಸುರರಱಿವರುನಿಲೈ ವಿಣ್ಮುದಲ್ ಮುೞುವದುಮ್,
ವರನ್ಮುದಲಾಯವೈ ಮುೞುದುಣ್ಡ ಪರಪರನ್,
ಪುರಮೊರುಮೂನ್ರೆರಿತ್ತಮರರ್ಕ್ಕುಮಱಿವಿಯನ್ದು,
ಅರನಯನೆನ ವುಲಗೞಿತ್ತಮೈತ್ತುಳನೇ.

ಪ್ರ|| ಸುರರ್—ಬ್ರಹ್ಮಾದಿದೇವತೆಗಳಿಗೆ, ಅಱಿವು ಅರು— ತಿಳಿಯಲಶಕ್ಯವಾದ, ನಿಲೈ—ಸ್ಥಿತಿಯುಳ್ಳ, ವಿಣ್ಮುದಲ್—ಆಕಾಶವೇ ಮೊದಲಾದ, ಮುೞುವದುಮ್—ಎಲ್ಲಾ ವಸ್ತುಗಳಿಗೂ, ವರನ್ಮುದಲಾಯ್—ಶ್ರೇಷ್ಠವಾದ ಕಾರಣ ವಸ್ತುವಾಗಿ, ಅವ್ವೈಮುೞುದು ಆ ಎಲ್ಲಾ ಪದಾರ್ಥಗಳನ್ನೂ, ಉಣ್ಡ—ಭಕ್ಷಿಸಿದ, ಪರಪರನ್—ಪರಾತ್ಪರನು, ಒರು ಮೂನ್ರುಪುರಮ್—ಅದ್ವಿತೀಯವಾದ ತ್ರಿಪುರವನ್ನು, ಎರಿತ್ತು—ಭಸ್ಮಮಾಡಿ, ಅಮರರ್ಕ್ಕುಮ್—ದೇವತೆಗಳಿಗೂ, ಅಱಿವು—ಜ್ಞಾನವನ್ನು, ಇಯನ್ದು—ಕೊಟ್ಟು, ಅರನ್ ಅಯನ್ ಎನ—ರುದ್ರನೋ ಬ್ರಹ್ಮನೋ ಎಂಬಂತೆ, ಉಲಕು—ಲೋಕಗಳನ್ನು, ಅೞಿತ್ತು ಅಮೈತ್ತು—ನಾಶಪಡಿಸಿ ಸೃಷ್ಟಿಸಿ, ಉಳನ್—ಅನ್ತರ್ಯಾಮಿಯಾಗಿರುವವನು.

( ಸ-ಗಾ-ರ || )---

**ಬ್ರಹ್ಮಾದ್ಯೈರಪಿ ನೈವ ವೇದ್ಯಮಿತಿ ಯನ್ಮೂಲಂ ಪರಂ ಸರ್ವತ-**
**ಶ್ಚಾಕಾಶಾದಿಪದಾರ್ಥಜಾತಮಖಿಲಂ ಚಾಶ್ನನ್ ಪರಾಣಾಂ ಪರಃ |**
**ದಗ್ಧ್ವಾಚಾಪಿ ಪುರತ್ರಯಂ ಸುರಗಣಾನುದ್ಬೋಧಯನ್ ಯಶ್ಶಿವೋ**
**ಬ್ರಹ್ಮಾ ವೇತಿ ವಿಭಾತಿ ವಿಶ್ವಮಯಮೇವಾಸ್ಮಿನ್ನಿಹೋತ್ಪಾದಯನ್ ||**

ತಾ|| (ಸ್ಥಿತಿ—ಸೃಷ್ಟಿ—ಸಂಹಾರ ಕರ್ತರಾದ ಬ್ರಹ್ಮರುದ್ರರೂ ಶ್ರೀಭಗವದಧೀನರೇ. ಹೇಗೆಂದರೆ)---ಬ್ರಹ್ಮಾದಿದೇವತೆಗಳಿಂದಲೂ ತಿಳಿಯಲಶಕ್ಯವಾದ ಕಾರಣ ವಸ್ತುವಾಗಿ ತಾನೇ ಆಕಾಶಾದಿ ಸರ್ವ ಪದಾರ್ಥಗಳನ್ನೂ (ಸಮಷ್ಟಿಯಲ್ಲಿ) ಸೃಷ್ಟಿಸಿ, ಅನನ್ತರ ಅವುಗಳನ್ನೆಲ್ಲಾ ತಾನೇ ಪ್ರಳಯಕಾಲದಲ್ಲಿ ಭಕ್ಷಿಸಿದ ಆ ಪರಾತ್ಪರನೇ ; ತ್ರಿಪುರದಹನವನ್ನೂ ಮಾಡಿ ದೇವತೆಗಳಿಗೆಲ್ಲಾ ಜ್ಞಾನವನ್ನೂ ಉಂಟುಮಾಡಿ, ಬ್ರಹ್ಮರುದ್ರಾದಿ ಶಬ್ದವಾಚ್ಯನಾಗಿಯೂ ತದನ್ತರ್ಯಾಮಿಯಾಗಿಯೂ ನಿಂತಿರುವವನು ಆದುದರಿಂದ, ಇವನು ಬ್ರಹ್ಮನೋ! ರುದ್ರನೋ! ಎಂದು ಎಲ್ಲರೂ ಭ್ರಮಿಸುವಂತೆ ಅನ್ತರ್ಗುಪ್ತನಾಗಿರುವವನು.

(೯) ಉಳನೆನಿಲುಳನವನುರುವಮಿವ್ವುರುವುಕಳ್,
ಉಳನಲನೆನಿಲವನರುವಮಿವ್ವರುವುಕಳ್,
ಉಳನೆನ ವಿಲನೆನ ವಿವೈ ಗುಣಮುಡೈಮೈಯಿಲ್,
ಉಳನಿರು ತಕೈಮೈಯೊಡೊೞಿವಿಲನ್ ಪರನ್ದೇ.

ಪ್ರ॥ ಉಳನ್ ಎನಿಲ್–ಇರುತ್ತಾನೆಂದರೂ; ಉಳನ್–ಇರುತ್ತಾನೆ, ಉಳನ್ ಅಲನ್ ಎನಿಲ್ - ಇರುವನನಲ್ಲವೆಂದರೂ, (ಉಳನ್–ಇರುತ್ತಾನೆ) ; ಅವನ್ ಉರುವಮ್–ಅವನ ರೂಪವೇ, ಇವ್ವುರುವುಕಳ್–ಈ ಪ್ರತ್ಯಕ್ಷವಾದ ವಸ್ತುಗಳು ; ಅವನ್ ಅರುವಮ್ – ಅವನ ರೂಪರಹಿತವಾದ (ಸೂಕ್ಷ್ಮ) ಸ್ವರೂಪವು, ಇವ್ವರುವುಕಳ್–ಈ ಅಪ್ರತ್ಯಕ್ಷವಾದ ವಸ್ತುಗಳು; ಉಳನೆನ ಇಲನೆನ–ಇದ್ದಾನೋ ಇಲ್ಲವೋ ಎಂಬಂತೆ, ಇವೈ–ಈ ಎರಡು ಪ್ರಕಾರಗಳನ್ನೂ, ಗುಣಮ್ ಉಡೈಮೈಯಿಲ್–(ಎರಡು) ಗುಣಗಳಾಗಿ ಉಳ್ಳವನಾದುದರಿಂದ, ಇರುತಕೈಮೈಯೊಡು–ಈ ಎರಡು ಸ್ವಭಾವಗಳೊಡನೆ ಕೂಡಿ, ಪರನ್ದು–ವ್ಯಾಪಿಸಿ, ಒೞಿವು ಇಲನ್–ನಾಶರಹಿತನಾಗಿ, ಉಳನ್–ಇರುತ್ತಾನೆ.

( ಶ–ಗಾ–ರ ॥ )—

ಅಸ್ತೀತ್ಯೇವ ವದೇದ್ಯದಿ ಸ್ವಯಮಯಂ ನಾಸ್ತೀತಿ ಚೇದಪ್ಯಸೋ !
ಭಾತಿ ಶ್ರೀಪತಿರಸ್ಯ ರೂಪಮಖಿಲಂ ವಿಶ್ವಾತ್ಮಕಂ ರೂಪಧೃತ್ ।
ಯಚ್ಚಾರೂಪಮಿದಂ ಚ ತಸ್ಯ ಹಿ ಪರೇಶಾರೂಪಮಂಶಾತ್ಮಕಂ
ಸತ್ತ್ವಾಸತ್ತ್ವಯುತಂ ಸ್ವಯಂ ದ್ವಿವಿಧಮಪ್ಯಾವಿಶ್ಯ ಭಾತ್ಯವ್ಯಯಃ ॥

ಪ್ರ॥ (ಇಲ್ಲಿ ಬೌದ್ಧಮತಕ್ಕೆ ಸೇರಿದ ಸರ್ವಶೂನ್ಯವಾದವು ಖಂಡಿಸಲ್ಪಡುತ್ತದೆ.) ಈಶ್ವರನು ಇದ್ದಾನೆಂದರೂ ಇಲ್ಲವೆಂದರೂ ಇರುತ್ತಲೇ ಇದ್ದಾನೆ. ಇದ್ದಾನೆಂಬುವ ಧರ್ಮವೂ ಇಲ್ಲವೆಂಬುವ ಧರ್ಮವೂ ಇವನಲ್ಲಿ ಗುಣಗಳಾಗಿ ಪ್ರಕಾಶಿಸುತ್ತಿವೆ. ಹೇಗೆಂದರೆ, ಇವನ ರೂಪವೇ ರೂಪವುಳ್ಳ ಸಕಲವಸ್ತುಗಳು ; ಇವನ ಅರೂಪಾಂಶವೇ ರೂಪರಹಿತವಾದ ಸಕಲವಸ್ತುಗಳು. ಈ ಪ್ರಕಾರ ರೂಪವತ್ತ್ವ, ಅರೂಪವತ್ತ್ವ–ಎಂಬ ಎರಡು ಸ್ವಭಾವಗಳೊಡನೆ ಕೂಡಿಯೇ ಇವನು ಸರ್ವವ್ಯಾಪಿಯಾಗಿಯೂ ನಾಶರಹಿತನಾಗಿಯೂ ಇರುತ್ತಾನೆ. (ಇವನ ಸತ್ತ್ವವು ಸಕಲ ದೃಶ್ಯಪ್ರಪಂಚಗಳಲ್ಲಿಯೂ ಕಾಣುತ್ತದೆ; ಇವನ ಅಸತ್ತ್ವವು, ರೂಪರಹಿತವಾಗಿ ಸತ್ತ್ವಶೂನ್ಯವಾಗಿರುವ ಕಾಲಾದಿಪದಾರ್ಥಗಳಲ್ಲಿ ಕಾಣುತ್ತದೆ. ಆದುದರಿಂದ ಸತ್ತ್ವಾಸತ್ತ್ವಗಳೆರಡೂ ಇವನ ಅಂಶಗಳೇ -ಎಂದು ತಾತ್ಪರ್ಯ.)

(೧೦) ಪರನ್ದತಣ್ ಪರವೈಯುಳ್ ನೀರ್ ತೊಱುಂ ಪರನ್ದುಳನ್;
ಪರನ್ದವಣ್ಡಮಿದೆನ ನಿಲವಿಶುಮ್ಬೊೞಿವಱ,
ಕ್ಕರನ್ದಶಿಲಿಡನ್ದೊಱುಮಿಡನ್ದಿಗೞ್ ಪೊರುಳ್ ತೊಱುಮ್,
ಕರನ್ದೆಙ್ಗುಂ ಪರನ್ದುಳನಿವೈಯುಣ್ಡ ಕರನೇ.

ಪ್ರ|| ಪರನ್ದ-ಸರ್ವತ್ರ ವ್ಯಾಪಿಸಿದ, ತಣ್-ಶೀತಲವಾದ, ಪರವೈಯುಳ್-ಕಾರಣಜಲರೂಪವಾದ ಏಕಾರ್ಣವದಲ್ಲಿ, ನೀರ್‌ತೊಱುಮ್ - ಸೂಕ್ಷ್ಮತಮವಾದ ಜಲಪರಮಾಣುಗಳಲ್ಲೆಲ್ಲಾ, ಪರನ್ದ ಅಣ್ಡಮ್ ಇದೆನ-ಮಹಾವಕಾಶವುಳ್ಳ ಅಣ್ಡದಲ್ಲೆಲ್ಲಾ ವ್ಯಾಪಿಸಿರುವಂತೆಯೇ, ಪರನ್ದುಳನ್ - ಅಸಂಕುಚಿತನಾಗಿರುವವನಾಗಿ, (ಹೀಗೆ) ನಿಲಮ್-ಭೂಮಿಯಲ್ಲೂ, ವಿಶುಮ್ಬು-ಆಕಾಶದಲ್ಲೂ (ಊರ್ಧ್ವಲೋಕಗಳಲ್ಲೂ), ಒೞಿವು ಅಱ-ಬಿಡುವನ್ನು ಬಿಡದೆ, ಕರನ್ದ-ಅತಿಸೂಕ್ಷ್ಮವಾದ, ಶಿಲಿಡನ್ದೊಱುಮ್-ಅಲ್ಪವಾದ ಸ್ಥಳಗಳಲ್ಲೆಲ್ಲಾ, ಇಡಮ್-ಅಂಥಾ ಸ್ಥಳಗಳಲ್ಲಿ, ತಿಗೞ್-ಸ್ವಯಂಪ್ರಕಾಶವಾಗಿ ಉಜ್ಜ್ವಲವಾದ, ಪೊರುಳ್ ತೊಱುಮ್ - ಆತ್ಮವಸ್ತುಗಳಲ್ಲೆಲ್ಲಾ, ಕರನ್ದು-ಗುಪ್ತನಾಗಿದ್ದುಕೊಂಡು, ಎಙ್ಗುಮ್-ಎಲ್ಲೆಲ್ಲಿಯೂ, ಪರನ್ದುಳನೇ-ವ್ಯಾಪಿಸಿರುವವನೇ, ಇವೈಯುಣ್ಡ ಕರೇ-ಇವುಗಳನ್ನೆಲ್ಲಾ ಭಕ್ಷಿಸಿ ಸ್ಥಿರನಾಗಿ ನಿಂತಿರುವವನು.

( ಸ-ಗಾ-ರ || )—

ಸರ್ವತ್ರಾಯತಶೀತವಾರಿಧಿಕಣೇಷ್ವಾವಿಶ್ಯ ಚಾಣುತ್ವತ-
ಸ್ಸರ್ವಂ ಚಾಪಿ ಮಹಾಣ್ಡಮಣ್ಡಲಮಯಂ ತ್ವಾಕ್ರಮ್ಯ ಭೂಮ್ನಾಸ್ವಯಮ್|
ಏವಂ ಭೂಮಿತಲೇ ಚ ಭಾತಿ ನಭಸಿ ವ್ಯಾಪ್ಯ ಸ್ಥಿತಸ್ಸರ್ವತೋ
ಭಾಸ್ವದ್ವಸ್ತುಷು ಗುಪ್ತ ಏವ ಹಿ ಹರಿ ಸ್ಸಂಹಾರಕರ್ತಾಽಪ್ಯಸೌ ||

ತಾ|| (ಶ್ರೀ ಭಗವನ್ತನು ಕಾರಣದಶೆಯಲ್ಲಿಯೂ ಕಾರ್ಯದಶೆಯಲ್ಲಿಯೂ ಕೂಡ ಅತಿ ಸೂಕ್ಷ್ಮವಾದ ಚೇತನಾಚೇತನಗಳಲ್ಲಿ ಅಸಂಕುಚಿತವಾಗಿ ವ್ಯಾಪಿಸಿ ಇರುತ್ತಾನೆಂದು ಇಲ್ಲಿ ಹೇಳಲ್ಪಡುತ್ತದೆ.) ಅತಿ ಸೂಕ್ಷ್ಮವಾದ ಸಮುದ್ರಜಲಪರಮಾಣುಗಳಲ್ಲಿಯೂ, ಪೃಥಿವ್ಯನ್ತರಿಕ್ಷಾದಿ ಲೋಕಾನ್ತರ್ವರ್ತಿಯಾದ ಸೂಕ್ಷ್ಮವಾದ ಅಚಿದ್ವಸ್ತುಗಳಲ್ಲಿಯೂ, ಅವುಗಳೊಳು ಪ್ರಕಾಶಿಸುತ್ತಿರುವ ಚಿದ್ವಸ್ತುಗಳಲ್ಲಿಯೂ ಮಹಾಣ್ಡದಲ್ಲಿ ವ್ಯಾಪಿಸಿರುವಂತೆಯೇ ಅಸಂಕುಚಿತನಾಗಿ ಅನ್ತರ್ಗೂಢನಾಗಿದ್ದುಕೊಂಡು ಸರ್ವತ್ರ ವ್ಯಾಪಿಸಿರುವವನೇ ಜಗತ್ಸಂಹಾರಕರ್ತನಾಗಿಯೂ ಸುದೃಢ ಪ್ರಮಾಣಸಿದ್ಧನಾಗಿಯೂ ಇರುತ್ತಾನೆ (ಇಂತಹ ಭಗವನ್ತನ ಪಾದಾರವಿಂದವನ್ನೇ ಭಜಿಸೆಂದು ಶ್ರೀ ಶಠಾರಿಯು ತಮ್ಮ ಮನಸ್ಸಿಗೆ ಉಪದೇಶಿಸುವ ಭಾವವು.)

(೧೧) ಕರವಿಶುಮ್ಬೆರಿವಳಿ ನೀರ್‌ನಿಲಮಿವೈಮಿಶೈ,
ವರನವಿಲ್‌ತ್ತಿಱಲ್‌ವಲಿ ಯಳಿಪ್ಪೊಱೈಯಾಯ್ ನಿನ್ಱ,
ಪರನಡಿಮೇಲ್ ಕುರುಕೂರ್‌ಚ್ಚಡಕೋಪನ್‌ಶೊಲ್,
ನಿರನಿಱೈಯಾಯಿರತ್ತಿವೈಪತ್ತುಮ್ ವೀಡೇ.

ಪ್ರ॥ ಕರವಿಶುಮ್ಬು – ಸೂಕ್ಷ್ಮವಾಗಿ ನೀಲವಾದ ಆಕಾಶವು, ಎರಿ–ಅಗ್ನಿ, ವಳಿ–ವಾಯು, ನೀರ್–ಜಲ, ನಿಲಮ್–ಭೂಮಿ (ಇವುಗಳು), ಇವೈಮಿಶೈ–ಇವುಗಳ ನ್ನಾಶ್ರಯಿಸಿರುವ (ಗುಣಗಳಾದ), ವರನವಿಲ್–ಶ್ರೇಷ್ಠವಾದ ಶಬ್ದವು, ತ್ತಿಱಲ್–ದಾಹಕತ್ವವು, ವಲಿ–ಬಲವು, ಅಳಿ–ಶೈತ್ಯವು, ಪೊಱೈ–ಧಾರಕತ್ವವು (ಇವುಗಳೆಲ್ಲಾ), ಆಯ್ ನಿನ್ಱ–ತಾನೇ ಆಗಿ ನಿಂತಿರುವ, ಪರನ್–ಸರ್ವೇಶ್ವರನ, ಅಡಿಮೇಲ್–ಪಾದಾರವಿಂದವನ್ನು ಕುರಿತು, ಕುರುಕೂರ್ ಶಡಕೋಪನ್–ಕುರುಕಾಪುರಿಯಲ್ಲಿ ಅವತರಿಸಿ ಶಠರಾದ ಬಾಹ್ಯ ಕುದೃಷ್ಟಿಗಳನ್ನು ಜಯಿಸಿರುವ ಶಠಾರಿಯೆಂಬ ನಮ್ಮಾಳ್ವಾರ್, ಶೊಲ್–ಶ್ರೀಸೂಕ್ತಿಯಾದ, ನಿರ ನಿಱೈ–ಶಬ್ದಾರ್ಥ ಗಾನ ಸ್ವರ ತಾಳಾದಿಗಳು ಸಂಗತವಾಗಿ ಪೂರ್ಣವಾಗಿ ಸೇರಿರುವ, ಆಯಿರತ್ತು–ಸಹಸ್ರಪದ್ಯಾತ್ಮಕವಾದ ಪ್ರಬನ್ಧದಲ್ಲಿ, ಇವೈಪತ್ತುಮ್—(ಪರತ್ವ ಪ್ರತಿಪಾದಕವಾದ) ಈ ದಶಕವು, ವೀಡೇ—(ಭಗವತ್ಪಾದಾರವಿಂದದಲ್ಲಿ) ಸಮರ್ಪಿಸಲ್ಪಟ್ಟಿದೆ. (ಮೋಕ್ಷಫಲಪ್ರದವಾಗಿದೆಯೆಂದೂ ತಾತ್ಪರ್ಯ)

( ಸ–ಗಾ–ರ ॥ )—

**ಸೂಕ್ಷ್ಮಾಕಾಶತಲಾನಲಾನಿಲಜಲಾವನ್ಯಾತ್ಮಕಾಸ್ತದ್ಗುಣಾ-**
**ಶ್ಶ್ರೇಷ್ಠಾಶ್ಶಬ್ದಸುತಾಪಶಕ್ತಿಧರತಾಶೈತ್ಯಾನಿ ಚಾಧಾರತಾ ।**
**ಏವಂ ಸರ್ವವಿಧಾತ್ಮಕಸ್ಯ ಪರಮಸ್ಯಾಸ್ಯೈವ ಪಾದಾಮ್ಬುಜೇ**
**ಸಾಹಸ್ರೇ ದಶಕಂ ಶಠಾರಿರಚಿತೇ ಚೈತತ್ ಸ್ವಭಕ್ತ್ಯಾಽರ್ಪಿತಮ್ ॥**

ತಾ॥ (ಈ ಪದ್ಯದಲ್ಲಿ ಈ ದಶಕವು ಮೋಕ್ಷಫಲಪ್ರದವೆಂದು ದಶಕದ ಫಲವು ಸೂಚಿಸಲ್ಪಟ್ಟಿದೆ.) ಪಂಚಭೂತಗಳೂ, ಅವುಗಳ ಗುಣಗಳೂ ತಾನೇ ಎಂಬಂತೆ ಪ್ರಕಾರಿಯಾಗಿ ನಿಂತಿರುವ ಸರ್ವೇಶ್ವರನ ಪಾದಾರವಿಂದ ಸ್ತುತಿರೂಪವಾಗಿ ಶ್ರೀಶಠಾರಿ ಮುನಿವರ್ಯರಿಂದ ವಿರಚಿತವಾಗಿರುವ ಸಹಸ್ರಪದ್ಯಾತ್ಮಕ ಪ್ರಬನ್ಧದಲ್ಲಿ ಭಕ್ತಿಯಿಂದ ಅರ್ಪಿತವಾದ ಈ ದಶಕವು ಮೋಕ್ಷಫಲಪ್ರದವೆಂದು ತಾತ್ಪರ್ಯ.

## (ದ್ರಮಿಡೋಪನಿಷತ್ಸಂಗತಿ.)

(ಶ್ರೀ-ವಾದಿಕೇಸರಿ ಅಳ್ಗಿಯಮಣವಾಳಜೀಯರಿಂದ ವಿರಚಿತವಾದುದು.)

ತತ್ರಾದಿಮೇತು ಶತಕೇ ದಶಕೇ ತದಾದ್ಯೇ ಸಮ್ಯಗ್ಗುಣಾಕೃತಿ ವಿಭೂತಿ ಸಮೇತಮೀಶಮ್ ।
ಅಧ್ಯಕ್ಷಯನ್ಪರಮನುಗ್ರಹತಸ್ತದೀಯಾತ್ತಸ್ಯಾಂಘ್ರಿಯೋರುಚಿತಮಾನಶ್ಶಠಜಿದ್ಬಭೂವ ॥

## ದ್ರಮಿಡೋಪನಿಷತ್ತಾತ್ಪರ್ಯರತ್ನಾವಳೀ.

(ಶ್ರೀ ವೇದಾನ್ತದೇಶಿಕರಿಂದ ವಿರಚಿತವಾದುದು.)

ನಿಸ್ಸೀಮೋದ್ಯದ್ಗುಣತ್ವಾದಮಿತರಸತಯಾನನ್ತಲೀಲಾಸ್ಪದತ್ವಾ-
ತ್ಸ್ವಾಯತ್ತಾಶೇಷಸತ್ತಾಸ್ಥಿತಿಯತನತಯಾ ವೈಭವಾದ್ದಿವ್ಯರೂಪಾತ್ ।
ತ್ರ್ಯಕ್ಷಬ್ರಹ್ಮಾತ್ಮಭಾವಾತ್ಸ್ವದಸನವಗತೇಃ ಸ್ವರ್ಗತತ್ತ್ವೇಷು ಪೂರ್ತೇಃ
ಸರ್ವಾನ್ ಯೋಗೀ ಪರಂ ತತ್ಪದಕಮಲನತಾವನ್ವಶಾದಾತ್ತಚಿತ್ತಾನ್ ॥

### ಈ ಪ್ರಥಮದಶಕದ ಸಾರಾಂಶ.

ಈ ಪ್ರಥಮಶತಕದ ಪ್ರಥಮದಶಕದಲ್ಲಿ ಶ್ರೀಶಠಾರಿಮುನಿವರ್ಯರು ಸರ್ವೇಶ್ವರನ ಕಲ್ಯಾಣಗುಣಗಳನ್ನೂ ಪರತ್ವಾದಿ-ವಿಭೂತಿದ್ವಯಾದಿ ನಾನಾಮಾಹಾತ್ಮ್ಯವನ್ನೂ ವರ್ಣಿಸಿ ಅವನ ಚರಣಾರವಿಂದಯುಗಳದಲ್ಲಿ ತಮ್ಮ ಮನಸ್ಸನ್ನು ನಿತ್ಯಸಕ್ತವಾಗಿರುವಂತೆ ಪ್ರೇರಿಸಿರುತ್ತಾರೆ.

---

ಶ್ರೀಃ

# ಪ್ರಥಮಶತಕದಲ್ಲಿ—ದ್ವಿತೀಯದಶಕ.

## ವೀಡುಮಿನ್ ಮುಱ್ಱವುಮ್

(ಈ ದಶಕವು ಪ್ರಪತ್ತಿ ವಿಷಯಕವಾದುದು.)

---

(೧) ವೀಡುಮಿನ್ಮುಱ್ಱವುಮ್-ವೀಡುಸೆಯ್ದು ಉಮ್ಮುಯಿರ್,
ವೀಡುಡೈಯಾನಿಡೈ-ವೀಡುಸೆಯ್ಮಿನೇ.

ಪ್ರ॥ ಮುಱ್ಱವುಮ್-ಎಲ್ಲಾ ವಸ್ತುಗಳನ್ನೂ, ವೀಡುಮಿನ್-ಬಿಡಿರಿ; ವೀಡುಸೆಯ್ದು-ಅವುಗಳನ್ನು ಬಿಟ್ಟು, ಉಮ್ ಉಯಿರ್-ನಿಮ್ಮ ಆತ್ಮತತ್ತ್ವವನ್ನು, ವೀಡುಉಡೈಯಾನ್ ಇಡೈ-ಪರಮಪದನಾಥನ ಸನ್ನಿಧಿಯಲ್ಲಿ, ವೀಡುಸೆಯ್ಮಿನೇ-ಸಮರ್ಪಿಸಿರಿ.

( ಸ-ಗಾ-ರ || )—

**ಅನ್ಯತ್ಸರ್ವಂ ಪರಿತ್ಯಜ್ಯ ಶ್ರೀಶೇ ಮೋಕ್ಷಪ್ರದೇ ಹರೌ |**
**ಸಮರ್ಪಯತ ಚಾತ್ಮಾನಂ ಯೂಯಂ ಸರ್ವೇ ಮುಮುಕ್ಷವಃ ||**

ತಾ|| ಭಗವದ್ವಿಷಯ ವ್ಯತಿರಿಕ್ತವಾದ ಸಮಸ್ತ ವಸ್ತುಗಳನ್ನೂ ಬಿಟ್ಟು ನಿಮ್ಮ ಆತ್ಮೋಜ್ಜೀವನಕ್ಕಾಗಿ ಮೋಕ್ಷಪ್ರದನಾದ ಪರಮಪದನಾಥನ- ಸನ್ನಿಧಿಯಲ್ಲಿ ಆತ್ಮ-ಸಮರ್ಪಣವನ್ನು (ಶರಣಾಗತಿಯನ್ನು) ಮಾಡಿರಿ.

(೨) ಮಿನ್ನಿನ್ನಿಲೈಯಿಲ-ಮನ್ನುಯಿರಾಕ್ಕೈಕಳ್,
ಎನ್ನುಮಿಡತ್ತಿಱೈ-ಉನ್ನುಮಿನ್ನೀರೇ.

ಪ್ರ|| ಉಯಿರ್-ಆತ್ಮನಿಗೆ, ಮನ್-ಭೋಗ್ಯವಾಗಿ ತೋರುತ್ತಿರುವ, ಆಕ್ಕೈಕಳ್-ಶರೀರಗಳು, ಮಿನ್ನಿನ್-ಮಿಂಚಿಗಿಂತ, ನಿಲೈ ಇಲ-ಅಸ್ಥಿರವಾದುವು; ಎನ್ನುಮ್ ಇಡತ್ತು-ಎಂದು ಹೇಳಬೇಕಾಗಿರುವಲ್ಲಿ, ನೀರೇ-ನೀವುಗಳೇ, ಇಱೈ-ಸರ್ವೇಶ್ವರನನ್ನು, ಉನ್ನುಮಿನ್-ಸ್ಮರಿಸಿರಿ.

( ಸ-ಗಾ-ರ || )—

**ನಿತ್ಯಸ್ಯಾಪ್ಯಾತ್ಮನೋ ದೇಹಾಸ್ತಟಿತೋಽಪ್ಯತಿನಶ್ವರಾಃ |**
**ಅತ ಏವ ಸ್ವಯಂ ಯೂಯಂ ನಿತ್ಯಂ ಸ್ಮರತ ಮಾಧವಮ್ ||**

ತಾ|| ನಿತ್ಯನಾದ ಆತ್ಮನಿಗೆ ಭೋಗ್ಯವಾಗಿ ತೋರುತ್ತಿರುವ ಪ್ರಾಕೃತಶರೀರಾದಿಗಳು ಮಿಂಚಿಗಿಂತಲೂ ಅತಿ ನಶ್ವರವಾದುದರಿಂದ ಇದನ್ನು ನೀವೇ ಚೆನ್ನಾಗಿ ಪರಿಶೀಲಿಸಿ ಭಗವತ್ಸ್ಮರಣವನ್ನೇ ಮಾಡಿರಿ.

(೩) ನೀರ್‌ನುಮದೆನ್ಱಿವೈ-ವೇರ್‌ಮುದಲ್‌ಮಾಯ್‌ತ್ತು, ಇಱೈ,
ಶೇರ್ಮಿನ್, ಉಯಿರ್ಕ್ಕದನ್ ನೇರ್‌ನಿಱೈಯಿಲ್ಲೇ.

ಪ್ರ|| ನೀರ್-ನೀವು, ನುಮದು-ನಿಮ್ಮದು, ಎನ್ಱು ಇವೈ-ಎಂಬಿವುಗಳನ್ನು, ವೇರ್‌ಮುದಲ್-ಬೇರಿನೊಡನೆ, ಮಾಯ್‌ತ್ತು-ಛೇದಿಸಿ, ಇಱೈ-ಭಗವಂತನನ್ನೇ, ಶೇರ್ಮಿನ್-ಭಜಿಸಿರಿ; ಉಯಿರ್ಕ್ಕು-ಆತ್ಮನಿಗೆ, ಅದನ್‌ನೇರ್-ಅದಕ್ಕೆ ಸಮಾನವಾದ, ನಿಱೈ-(ಇಷ್ಟಾರ್ಥ) ಪೂರ್ತಿಯು, ಇಲ್ಲೇ-ಇಲ್ಲವೇ ಇಲ್ಲ.

( ಸ-ಗಾ-ರ || )—

**ಅಹಂ ಮಮೇತಿ ಸರ್ವಂ ಚ ಪ್ರಹತ್ಯೈವ ಸಮೂಲಕಮ್ |**
**ಭಜಧ್ವಂ ಸ್ವಾಮಿನಂ ವಿಷ್ಣುಂ ! ನಾತ್ಮನಃ ಪೂರ್ತಿರೀದೃಶೀ ||**

ತಾ|| ಆತ್ಮನಾಶಕರವಾದ ಅಹಂಕಾರ ಮಮಕಾರಗಳನ್ನು ಸಮೂಲವಾಗಿ ಬಿಟ್ಟು ಭಗವಂತನನ್ನೇ ಭಜಿಸಿರಿ. ಆತ್ಮೋಜ್ಜೀವನಕ್ಕೆ ಇದರಂತೆ ಪೂರ್ಣವಾದ ಭಾಗ್ಯವು ಯಾವುದೂ ಇಲ್ಲ

(೨) ಇಲ್ಲದುಮುಳ್ಳದುಮ್-ಅಲ್ಲದವನುರು,
ಎಲ್ಲೈಯಿಲನ್ನಲಮ್-ಪುಲ್‌ಕುಪತ್ತತ್ತೇ.

ಪ್ರ|| ಇಲ್ಲದುಮ್-ಅಸತ್ಪ್ರಾಯವಾದ ಜಡವಸ್ತುವಿನಂತೆಯೂ, ಉಳ್ಳದುಮ್-ಸತ್ಯಸ್ವರೂಪವಾದ ಆತ್ಮವಸ್ತುವಿನಂತೆಯೂ, ಅಲ್ಲದು-ಅಲ್ಲದೆ, ಅವ‌ನ್ ಉರು-ಅವನಸ್ವರೂಪವು, ಎಲ್ಲೈ ಇಲ್-ಅಪರಿಚ್ಛಿನ್ನವಾದ, ಅನ್ನಲಮ್ - ಆ ಆನನ್ದ ರೂಪವಾಗಿರುವುದು. (ಆದುದರಿಂದ) ಪತ್ತು-ಇತರ ವಿಷಯಸಂಬನ್ಧವನ್ನು, ಅತ್ತು-ಬಿಟ್ಟು, (ಅವನನ್ನೇ) ಪುಲ್‌ಕು-ಭಜಿಸು.

( ಸ-ಗಾ-ರ || )—

**ತಸ್ಯ ರೂಪಂ ನಸನ್ನಾಸದಪ್ರಮೇಯಸುಖಾತ್ಮಕಮ್ |**
**ತಸ್ಮಾದ್ವಿಷಯಸಮ್ಬನ್ಧಂ ಪರಿತ್ಯಜ್ಯ ಭಜಾದ್ಯ ತಮ್ ||**

ತಾ|| ಅವನ (ಸರ್ವೇಶ್ವರನ) ಸ್ವರೂಪವು ಚಿದಚಿದ್ವಿಲಕ್ಷಣವಾಗಿ ನಿರತಿಶಯಾನನ್ದರೂಪವಾಗಿರುವುದರಿಂದ ಇತರವಿಷಯಸಂಗವನ್ನು ಬಿಟ್ಟು ಅವನನ್ನೇ ಭಜಿಸು.

(೩) ಅತ್ತದುಪಱ್ಱೆನಿಲ್-ಉತ್ತದುವೀಡುಯಿರ್,
ಶೆಱ್ಱದು ಮನ್ನುಱಿಲ್ ಅಱ್ಱಿಱೈ ಪಱ್ಱೇ

ಪ್ರ|| ಪತ್ತು - ವಿಷಯಸಂಬನ್ಧವು, ಅತ್ತದು ಎನಿಲ್ - ಬಿಟ್ಟುಹೋದರೆ, ಉಯಿರ್-ಆತ್ಮತತ್ತ್ವವು, ವೀಡು-(ಕೈವಲ್ಯವೆಂಬ) ಮೋಕ್ಷವನ್ನು, ಉತ್ತದು-ಹೊಂದುವುದು. ಅದು-ಆ ಕೈವಲ್ಯವೆಂಬ ಮೋಕ್ಷವನ್ನು, ಶೆತ್ತು-ಬಿಟ್ಟು, ಮನ್ ಉತ್ತಿಲ್-ಶಾಶ್ವತವಾದ ಅದ್ವಿತೀಯ ಪುರುಷಾರ್ಥವನ್ನು ಹೊಂದಬೇಕಾದರೆ, ಅತ್ತು-ಇತರಸಂಗವನ್ನು ಬಿಟ್ಟು, ಇತ್ತೈ-ಸರ್ವೇಶ್ವರನನ್ನೇ, ಪತ್ತು-ಆಶ್ರಯಿಸು.

( ಸ-ಗಾ-ರ || )—

**ತ್ಯಕ್ತೇ ವಿಷಯಸಮ್ಬನ್ಧೇ ಮುಕ್ತಿಸ್ಸ್ಯಾತ್ಸ್ವಾತ್ಮಾನುಭೂತಯೇ |**
**ಮುಕ್ತಿಂ ತಾಂ ಚ ಪರಿತ್ಯಜ್ಯ ಕೈಂಕರ್ಯಾರ್ಥಂ ಭಜಾಚ್ಯುತಮ್ ||**

ತಾ|| ವಿಷಯಸಂಬನ್ಧವನ್ನು ಬಿಟ್ಟಮೇಲೆ ಆತ್ಮಾನುಭವವೆಂಬ ಕೈವಲ್ಯವು ದೊರಕುವುದು. (ಅದೂ ಕೂಡ ತ್ಯಾಜ್ಯವಾದುದರಿಂದ) ಪರಮಪದದಲ್ಲಿ ನಿತ್ಯ

ನಿರತಿಶಯಾನನ್ದವನ್ನು ಕೊಡುವ ಶ್ರೀಭಗವತ್ಕೈಂಕರ್ಯರೂಪವಾದ ಪುರುಷಾರ್ಥ ವನ್ನೇ ಅವನ ಅನುಗ್ರಹದಿಂದ ಪಡೆಯಬೇಕೆಂದು ತಾತ್ಪರ್ಯ.

(೬) ಪತ್ತಿಲನೀಶನುಮ್-ಮುತ್ತವುಮ್ ನಿನ್ರನನ್,
ಪತ್ತಿಲೈಯಾಯವನ್-ಮುತ್ತಿಲಡಙ್ಗೇ

ಪ್ರ॥ ಈಶನುಮ್--ಸರ್ವೇಶ್ವರನೂ, ಪತ್ತಿಲನ್ – ಸಂಗರಹಿತನಾಗಿ, ಮುತ್ತವುಮ್–(ನಮಗೆ ಧಾರಕಪೋಷಕ ಭೋಗ್ಯಾದಿ)ಸಮಸ್ತವೂ ಆಗಿ, ನಿನ್ರನನ್–ನಿಂತಿರುತ್ತಾನೆ. ಪತ್ತು ಇಲೈ ಆಯ್–(ನೀನೂ) ಸಂಗರಹಿತನಾಗಿ, ಮುತ್ತಿಲ್–(ಧಾರಕತ್ವಾದಿ) ಸಮಸ್ತ ಗುಣಸಮುದಾಯದಲ್ಲಿ, ಅಡಙ್ಗು–ಅನ್ತರ್ಭವಿಸು–(ಪಾತ್ರನಾಗು)

( ಸ–ಗಾ–ರ ॥ )—

**ನಾಥೋಽಪಿ ಸರ್ವಲೋಕಾನಾಂ ನಿಸ್ಸಂಗೋ ಭಾತಿ ಮಾಧವಃ ।**
**ಏಕರೂಪೋಽಸ್ತಿ ಸರ್ವತ್ರ ! ನಿಸ್ಸಂಗಸ್ತ್ವಂ ಭಜಾನಿಶಮ್ ॥**

ತಾ॥ ಸರ್ವಲೋಕಗಳಿಗೂ ನಾಯಕನಾದ ಅವನೂಕೂಡ (ಪಕ್ಷಪಾತವಿಲ್ಲದೆ) ನಿಸ್ಸಂಗನಾಗಿಯೇ ಸರ್ವರಿಗೂ ಸಮಾನನಾಗಿ ಧಾರಕತ್ವಾದಿ ಗುಣಪೂರ್ಣನಾಗಿರು. ವುದರಿಂದ ನೀನೂಕೂಡ ನಿಸ್ಸಂಗನಾಗಿ ಅವನನ್ನೇ ಭಜಿಸಿ ಅವನ ಧಾರಕತ್ವಾದಿ ಗುಣಗಳಿಗೆ ಪಾತ್ರನಾಗು.

(೭) ಅಡಙ್ಗೆೞಿಲ್ ಸಮ್ಪತ್ತು-ಅಡಙ್ಗಕ್ಕಣ್ಡು ಈಶನ್
ಅಡಙ್ಗೆೞಿಲಃದೆನ್ರು ಅಡಙ್ಗುಕವುಳ್ಳೇ.

ಪ್ರ॥ ಅಡಙ್ಗು ಎೞಿಲ್ – ಸರ್ವತ್ರ ರಮ್ಯವಾದ, ಸಮ್ಪತ್ತು – ಸಮ್ಪತ್ತನ್ನು ಅಡಙ್ಗ–ಪೂರ್ಣವಾಗಿ, ಕಣ್ಡು–ಪರಿಶೀಲಿಸಿ, ಈಶನ್–ಸರ್ವೇಶ್ವರನಿಗೆ, ಅಃದು–ಅದು, ಅಡಙ್ಗು ಎೞಿಲ್–ಅತ್ಯನ್ತ ಶೇಷಭೂತವಾದುದು, ಎನ್ರು–ಎಂದು (ಈ ಸಮ್ಬನ್ಧವನ್ನು ತಿಳಿದುಕೊಂಡು), ಉಳ್ಳೇ–ಅದರೊಳಗೆ, ಅಡಙ್ಗುಕ–ನೀನೂ ಸೇರಿ ಇರು.

( ಸ–ಗಾ–ರ ॥ )—

**ಐಶ್ವರ್ಯಂ ಸರ್ವಮಾಲೋಕ್ಯ ರಮ್ಯಂ ತಸ್ಯ ವಿಭೂತಿಗಮ್ ।**
**ಈಶಸ್ಯೈತ್ಯೇವ ಮತ್ವಾ ತ್ವಂ ತತ್ರ ಚೈಕೀಭವಾನಿಶಮ್ ॥**

ತಾ॥ಲೀಲಾವಿಭೂತಿ–ನಿತ್ಯವಿಭೂತಿಯೆಂಬ ಈ ಮಹಾಸಮ್ಪತ್ತನ್ನೆಲ್ಲಾ ನೋಡಿ ಇದೆಲ್ಲಾ ನಮ್ಮ ಸ್ವಾಮಿಯಾದ ಭಗವನ್ತನ ಐಶ್ವರ್ಯವೆಂದು ತಿಳಿದುಕೊಂಡು ನೀನೂ ಅದರೊಳಗೆ ಸೇರಿ ಅವನನ್ನೇ ಭಜಿಸಿ ಸೇವಿಸುತ್ತಿರು.

(೮) ಉಳ್ಳಲುರೈಶೆಯಲ್-ಉಳ್ಳಇಮ್ಮೂನ್ರೈಯುಮ್.
ಉಳ್ಳಿಕ್ಕೆಡುತ್ತಿಱೈ-ಉಳ್ಳಿಲೊಡುಙ್ಗೇ.

ಪ್ರ|| ಉಳ್ಳಲ್-ಮನಸ್ಸೂ, (ಧ್ಯಾನವೂ), ಉರೈ-ವಾಕ್ಕೂ, ಶೆಯಲ್-ಕಾರ್ಯವೂ (ಕಾಯದ ಕೃತ್ಯವೂ), ಉಳ್ಳ-ಈ ಮೂರನ್ನೂ ಉಳ್ಳ, ಇಮ್ಮೂನ್ರೈಯುಮ್-ಈ ಮೂರನ್ನೂ (ಈಮನೋವಾಕ್ಕಾಯಗಳನ್ನು), ಉಳ್ಳಿ-(ಇವುಗಳ ಉತ್ಪತ್ತಿ-ಪ್ರಯೋಜನಗಳನ್ನು) ವಿಚಾರಿಸಿ, ಕೆಡುತ್ತು-ಇತರ ವಿಷಯಗಳಲ್ಲಿ ಪ್ರವೃತ್ತಿಯನ್ನು ನಿವಾರಿಸಿ, ಇಱೈ-ಉಳ್ಳಿಲ್-ಸರ್ವೇಶ್ವರನ ವಿಷಯದಲ್ಲಿಯೇ, ಒಡುಙ್ಗು-ಸಕ್ತನಾಗಿ ಇರು.

( ಸ-ಗಾ-ರ || )—

ಮನೋವಾಕ್ಕಾಯರೂಪಂ ಚ ಸಾರ್ಥಕಂ ಕರಣತ್ರಯಮ್ |
ಮತ್ವಾ ತ್ವಂ ಭವ ನಿಸ್ಸಙ್ಗಸ್ಸಕ್ತಸ್ಸರ್ವೇಶ್ವರೇ ಭವ ||

ತಾ|| ಮನೋವಾಕ್ಕಾಯಗಳೆಂಬ ಕರಣತ್ರಯವು ಭಗವದನುಭವಕ್ಕೋಸ್ಕರವೇ ಹುಟ್ಟಿದುದೆಂದು ತಿಳಿದು ತದ್ವ್ಯತಿರಿಕ್ತ ವಿಷಯಗಳಲ್ಲಿ ಪ್ರವರ್ತಿಸದಂತೆ ಕರಣತ್ರಯವನ್ನೂ ಭಗವಂತನಲ್ಲಿಯೇ ಸಮರ್ಪಿಸಿ ಕೃತಾರ್ಥನಾಗು.

(೯) ಒಡುಙ್ಗವವನ್ಕಣ್-ಒಡುಙ್ಗಲುಮೆಲ್ಲಾಮ್.
ವಿಡುಮ್‌ಪಿನ್ನುಮಾಕ್ಕೈ ವಿಡುಮ್‌ಪೊೞ್ದೆಣ್ಣೇ.

ಪ್ರ||ಅವನ್ಕಣ್-ಆ ಸರ್ವೇಶ್ವರನಲ್ಲಿ, ಒಡುಙ್ಗ-ಸಕ್ತನಾದರೆ, ಒಡುಙ್ಗಲುಮ್ ಎಲ್ಲಾಮ್-ಜ್ಞಾನಸಂಕೋಚಾದಿದೋಷಗಳೆಲ್ಲಾ, ವಿಡುಮ್-ಬಿಟ್ಟುಹೋಗುವುವು. ಪಿನ್ನುಮ್-ಮತ್ತೂ, ಆಕ್ಕೈ-ಶರೀರವನ್ನು, ವಿಡುಮ್ ಪೊೞ್ದು-ಬಿಟ್ಟುಹೋಗುವ ಕಾಲವನ್ನು, ಎಣ್-ಸ್ಮರಿಸುತ್ತಿರು (ನಿರೀಕ್ಷಿಸುತ್ತಿರು).

( ಸ-ಗಾ-ರ || )—

ಆಶ್ರಿತೇ ಚ ತ್ವಯಾ ತಸ್ಮಿನ್ನಶ್ಯನ್ತಿ ಪ್ರತಿಬನ್ಧಕಾಃ|
ಶರೀರತ್ಯಾಗಕಾಲನ್ತು ಪ್ರತೀಕ್ಷಸ್ವ ತತಃ ಪರಮ್||

ತಾ|| ಅವನನ್ನು ಆಶ್ರಯಿಸಿದರೆ ಜ್ಞಾನಸಂಕೋಚಾದಿ ದೋಷಗಳೆಲ್ಲಾ ತಾವೇ ನಾಶವನ್ನು ಹೊಂದುವುವು. ಅನನ್ತರ ಶರೀರತ್ಯಾಗಕಾಲವನ್ನು ನಿರೀಕ್ಷಿಸುತ್ತಿರು.

(೧೦) ಎಣ್‌ಪೆರುಕ್ಕನ್ನಲತ್ತು–ಒಣ್‌ಪೊರುಳೀಱಿಲ
ವಣ್‌ಪುಕಳ್ನಾರಣನ್-ತಿಣ್‌ಕಳಲ್ ಸೇರೇ.

ಪ್ರ|| ಎಣ್–ಚಿನ್ತಿಸಲು, ಪೆರುಕ್ಕ್–ಪ್ರವಹಿಸುವ, ಅನಲಮ್–ಆ ಆ ಜ್ಞಾನಾದಿ ಗುಣಗಳುಳ್ಳ, ಒಣ್‌ಪೊರುಳ್ – ರಮಣೀಯವಾದ ಚೇತನವರ್ಗಗಳನ್ನು, ಈಱಿಲ-ಅಸಂಖ್ಯಾತವಾದ, ವಣ್‌ಪುಕಳ್ – ಉದಾರವಾದ ಕಲ್ಯಾಣಗುಣಗಳನ್ನು ತನ್ನಲ್ಲಿ ಪಡೆದಿರುವ, ನಾರಣನ್ ಶ್ರೀಮನ್ನಾರಾಯಣನ, ತಿಣ್–ಧೃಢವಾದ (ಆಶ್ರಿತರನ್ನು ಕೈಬಿಡದಂತೆ ರಕ್ಷಿಸುವುದಕ್ಕೆ ಸ್ಥಿರವಾಗಿರುವ), ಕಳಲ್–ಚರಣಗಳನ್ನು, ಸೇರ್–ಹೊಂದು.

( ಸ-ಗಾ-ರ || )—

ಅಮಿತಾನನ್ದಸದ್ವಸ್ತುಕಲ್ಯಾಣಗುಣವಾರಿಧೇಃ |
ಶ್ರೀಮನ್ನಾರಾಯಣಸ್ಯೈವ ಪಾದಾಬ್ಜಂ ದೃಢಮಾಶ್ರಯ ||

ತಾ|| ಅನನ್ತಾನನ್ದಸ್ವರೂಪವನ್ನೂ, ಚಿದ್ವಸ್ತುಗಳನ್ನೂ, ಕಲ್ಯಾಣಗುಣಗಳನ್ನೂ ಅಸಂಖ್ಯೇಯವಾಗಿ ತನ್ನಲ್ಲಿಟ್ಟುಕೊಂಡಿರುವ ಶ್ರೀಮನ್ನಾರಾಯಣನ ದೃಢವಾದ ಪಾದಗಳನ್ನೇ ಆಶ್ರಯಿಸು.

(೧೧) ಸೇರ್‌ತ್ತಡತ್ತೆನ್ಕುರುಕೂರ್‌ಚ್ಚಠಕೋಪನ್‌ಸೊಲ್
ಸೀರ್‌ತ್ತೊಡೈಯಾಯಿರತ್ತು–ಓರ್ತ್ತ ಇಪ್ಪತ್ತೇ.

ಪ್ರ|| ಸೇರ್–ಪೂರ್ಣವಾದ, ತಡಮ್ – ತಟಾಕಗಳುಳ್ಳ, ತೆನ್–ರಮ್ಯವಾದ, ಕುರುಕೂರ್–ಕುರುಕಾಪುರಿಗೆ ಸ್ವಾಮಿಯಾದ ಶಠಕೋಪನ್-ಶ್ರೀಶಠಾರಿಮುನಿವರ್ಯರು, ಸೊಲ್–ಹೇಳಿದ, ಸೀರ್‌ತ್ತೊಡೈ – ರಮ್ಯಾರ್ಥರಚನೆಗಳುಳ್ಳ, ಆಯಿರತ್ತು–ಸಹಸ್ರ ಪದ್ಯಮಾಲೆಯಲ್ಲಿ, ಇಪ್ಪತ್ತು–ಈ ದಶಕವು, ಓರ್ತ್ತ–ಚೆನ್ನಾಗಿ (ಪ್ರಪತ್ತಿಪರವಾಗಿ) ನಿರೂಪಿಸಲ್ಪಟ್ಟಿತು.

( ಸ-ಗಾ-ರ || )—

ರಮ್ಯೇ ತಟಾಕಭೂಯಿಷ್ಠೇ ಕುರುಕಾನಗರೇ ಪ್ರಭೋಃ |
ಶಠಕೋಪಸ್ಯ ದಿವ್ಯೋಕ್ತಿಸಾಹಸ್ರೇ ದಶಕಂ ತ್ವಿದಮ್ ||

ತಾ|| ರಮಣೀಯವಾಗಿಯೂ ತಟಾಕಪರಿಪೂರ್ಣವಾಗಿಯೂ ಇರುವ ಕುರುಕಾಪುರಿಗೆ ನಿರ್ವಾಹಕರಾದ ಶ್ರೀ ಶಠಾರಿಮುನಿವರ್ಯರ ದಿವ್ಯಗಾಥಾಸಹಸ್ರದೊಳು ಈ ದಶಕವು (ಪ್ರಪತ್ತಿವಿಷಯವಾಗಿ) ರಚಿಸಲ್ಪಟ್ಟಿತು.

(ದ್ರ-ಉ-ಸಂ)

ಸಂಸಾರಿಣೋಽಸ್ಯ ಸುಜನಸ್ಯ ಸ್ವಕ್ಷುರೇಣ ದಯಮಾನಪಾತ್ಮನಿ ಹಿತೇತರಪುರುಷಾರ್ಥರುಚಿಂ ನಿರಸ್ಯ ।
ತಸ್ಯಾಂಗಸ್ತೋನಸಂಭಕ್ತಿ ಸುಧಾಂ ಬುಭಾನಾ ಮುನಿರ್ದಶಕಮುಕ್ತದಿನೇಽತ ಸುಭಿಗ್ನಿರಶೀಯಂತೋ॥

(ದ್ರ-ಉ-ತಾ-ರ)

ಸ್ವಾಮಿತ್ವಾತ್ಸ್ವಸ್ಥಿರತ್ವಾತ್ಸ್ವಿವಿಭವಮಹಸಿತ್ವಾತ್ತ ನಿವಾಸ್ಯಸ್ಯ ಭಾವಾ –
ತ್ವಾದೃಕ್ಸ್ವರ್ಗಾನುಕೂಲ್ಯಾಚ್ಚ ವನನದೀತರಪ್ರಾಪ್ಯತ್ವೈಷಮ್ಯವತ್ವಾತ್ ।
ಸರ್ವತ್ರಾಪಕ್ಷರಾತಾದ್ಭುಭಗಿಭವತ ಶರಾ ಮಾನಸಾದ್ಯಕ್ಷರಭಾವಾ–
ತ್ತ್ವತ್ಸ್ತೋನೈಕತ್ವಾಜ್ಜಗದವತಯೋಽತಾನಿಪತ್ನರ್ವಯೋಗ್ಯಾವರ್॥

**ದ್ವಿತೀಯದಶಕದ ಸಾರಾಂಶ.**

ಈ ಎರಡನೆಯದಶಕದಲ್ಲಿ ಸಂಸಾರಿಚೇತನರನ್ನು ಕುರಿತು–ಇತರ ಪುರುಷಾರ್ಥಗಳನ್ನು ಬಿಟ್ಟು ಪರಮಪುರುಷಾರ್ಥವನ್ನೇ ಹೊಂದಲು ಶ್ರೀ ಭಗವಚ್ಚರಣಗಳಲ್ಲಿ ಪ್ರಪತ್ತಿಯನ್ನು ಮಾಡಿರಿ—ಎಂದು ಉಪದೇಶಿಸಿರುತ್ತಾರೆ.

---

ಶ್ರೀಃ

# ಪ್ರಥಮಶತಕದಲ್ಲಿ—ತೃತೀಯದಶಕ.

## (ಪತ್ತುಡೈಯಡಿಯವರ್ಕ್ಕು)

## (ಸರ್ವೇಶ್ವರನ ಸೌಲಭ್ಯಾದಿ ಗುಣವರ್ಣನ.)

(೧) ಪತ್ತುಡೈಯಡಿಯವರ್ಕ್ಕೆಳಿಯವನ್ ಪಿರರ್ಗಳುಕ್ಕರಿಯ
ವಿತ್ತಗನ್, ಮಲರ್ಮಗಳ್ ವಿರುಂಬುಂ ನಮರುಂಬೆರಲಡಿಗಳ್,
ಮತ್ತುರು ಕಡೈವೆಣ್ಣೆಯ್ ಕಳವಿನಿಲುರವಿಡೈಯಾಪ್ಪುಂಡು,
ಎತ್ತಿರ ಮುರಲಿನೋಡಿಣೈಂದಿರುಂದೇಙ್ಗಿಯ ವೆಳಿವೇ.

ಪ್ರ॥ ಪತ್ತುಡೈ–ಭಕ್ತಿಯುಳ್ಳ, ಅಡಿಯವರ್ಕ್ಕು–ಆಶ್ರಿತರಿಗೆ, ಎಳಿಯವನ್–ಸುಲಭನಾಗಿ, ಪಿರರ್ಗಳುಕ್ಕು–ಇತರರಿಗೆ, ಅರಿಯ–ದುರ್ಲಭ (ಹೊಂದಲಶಕ್ಯ) ನಾದ, ವಿತ್ತಗನ್–ಆಶ್ಚರ್ಯಭೂತನು ; ಮಲರ್ಮಗಳ್–ಪದ್ಮೋದ್ಭವೆಯಾದ ಲಕ್ಷ್ಮೀದೇವಿಯು, ವಿರುಂಬುಂ–ಪ್ರೀತಿಸುವಂತಹ, ಪೆರಲ್ ಅರುಮ್–ಹೊಂದಲಶಕ್ಯನಾದ, ನಮ್ ಅಡಿಕಳ್–ನಮ್ಮ ಸ್ವಾಮಿಯು; ಮತ್ತು–ಮತ್ತಿನಿಂದ, ಉರು ಪ್ರಯತ್ನ

ದೊಡನೆ, ಕಡ್ಡೈ-ಕಡೆದ, ವೆಣ್ಣೆಯ್-ಬೆಣ್ಣೆಯ, ಕಳವಿನಿಲ್-ಚೌರ್ಯದಲ್ಲಿ, ಉರವಿಡೈ-ವಕ್ಷಸ್ಥಲದ ಪಾರ್ಶ್ವದಲ್ಲಿ, ಆಪ್ಪುಣ್ಣು-ಕಟ್ಟಲ್ಪಟ್ಟು, ಉರಲಿನೋಡು-ಒರಳಿನೊಡನೆ, ಇಣೈನ್ದಿರುನ್ದು-ನಿಶ್ಚಲನಾಗಿದ್ದುಕೊಂಡು, ಏಙ್ಗಿಯ-ಭಯದಿಂದ ಸ್ವರಹೊರಡದಂತೆ ಬಿಕ್ಕಿಬಿಕ್ಕಿ ಅಳುವ, ಎಳಿವು-ಸೌಲಭ್ಯವು, ಎತ್ತಿಅವ್-ಯಾವಪ್ರಕಾರವೋ !!!

( ಸ-ಗಾ-ರ || )—

**ಭಕ್ತಾನಾಂ ಸುಲಭೋಽಸ್ತಿ!ದುರ್ಲಭತಮಸ್ತ್ವನ್ಯೈಶ್ಚನಾಮದ್ಭುತ-**
**ಶ್ರೀಕಾನ್ತಃ ಪರಮಃ ಪ್ರಭುಸ್ಸ ಕಿಲ ನಃ ಪ್ರಾಪ್ಯೋ ನ ಚಾನ್ಯೈರಸೌ|**
**ಮನ್ಥೋದ್ಯನ್ನವನೀತಚೌರ್ಯವಿಧಯಾ ಚೋಲೂಖಲೇ ಬನ್ಧಭಾ-**
**ಗ್ವಕ್ಷಃಪಾರ್ಶ್ವತಲೇ ! ಭಯಾದ್ವಿಲಪತಸ್ಸೌಲಭ್ಯಕಾಷ್ಠಾ ಽಸ್ಯ ಕಾ! ||**

ತಾ|| ಭಕ್ತರಿಗೆ ಸುಲಭನಾಗಿಯೂ, ಇತರರಿಗೆ ದುರ್ಲಭನಾಗಿಯೂ, ಆಶ್ಚರ್ಯಭೂತನಾಗಿ, ಲಕ್ಷ್ಮೀದೇವಿಯಿಂದ ಪ್ರೀತಿಸಲ್ಪಡುವವನಾಗಿಯೂ ಇರುವ ನಮ್ಮ ಸ್ವಾಮಿಯಾದ ಸರ್ವೇಶ್ವರನು, ನವನೀತಚೌರ್ಯವಂಮಾಡಿ ಒರಳಿಗೆ ಕಟ್ಟಿಹಾಕಲ್ಪಟ್ಟಾಗ ಬಿಕ್ಕಿ ಬಿಕ್ಕಿ ಗದ್ಗದಸ್ವರವುಳ್ಳವನಾಗಿ ಭೀತಿಯಿಂದ ಅಳುವಂತೆ ನಟಿಸುತ್ತಿದ್ದ ಸೌಲಭ್ಯವು ಎಂತಹುದೋ !!! (ಸರ್ವೇಶ್ವರನು ಆಗ ಈ ಪ್ರಕಾರ ಭೀತನಂತೆ ನಟಿಸುತ್ತಿದ್ದುದರಿಂದ ಈ ಸೌಲಭ್ಯವು ಅತ್ಯಾಶ್ಚರ್ಯಕರವೆಂದು ತಾತ್ಪರ್ಯ.)

(೨) ಎಳಿವರುಮಿಯಲ್ಪಿನ ನಿಲೈವರಮ್ಬಿಲ, ಪಲಪಿಱಪ್ಪಾಯ್,
ಒಳಿವರು ಮುಱ್ಱುನಲಮ್ ಮುದಲಿಲ ಕೇಡಿಲ, ವೀಡಾಮ್',
ತೆಳಿದರು ನಿಲೈಮೈಯದೊೞಿವಿಲನ್ ಮುಱ್ಱುಮದುವಿ
ತ್ತಾಯೋನ್,
ಅಳಿವರು ಮರುಳಿನೋಡಕತ್ತನನ್ ಪುಱತ್ತನ ನಮ್ಮೈನ್ದೇ.

ಪ್ರ|| ನಿಲೈ-ಒಂದುಸ್ಥಿತಿಯೂ, ವರಮ್ಬು-ಒಂದು ನಿಯತಿಯೂ, ಇಲ-ಇಲ್ಲದ, ಪಲ-ಅನೇಕ ಪ್ರಕಾರವಾದ, ಪಿಱಪ್ಪಾಯ್-ಅವತಾರಗಳುಳ್ಳವನಾಗಿ, ಮುದಲಿಲ-ಆದಿಯಿಲ್ಲದ, ಕೇಡಿಲ-ಅನ್ತವಿಲ್ಲದ, ಮುಱ್ಱುನಲಮ್ (ಪೂರ್ಣಜ್ಞಾನಾದಿ) ಕಲ್ಯಾಣಗುಣಗಳೆಲ್ಲಾ, ಒಳಿವರುಮ್-ಪ್ರಕಾಶಿಸುವಂತೆ, ಎಳಿವರುಮ್ ಇಯಲ್ಪಿನನ್-ಸೌಲಭ್ಯವನ್ನೇ ಸ್ವಭಾವವಾಗಿಯುಳ್ಳವನೂ; ವೀಡಾಮ್-ಮೋಕ್ಷವೆಂಬ, ತೆಳಿತರುಮ್-ವಿಶದಜ್ಞಾನವನ್ನುಂಟುಮಾಡುವ, ಅದುನಿಲೈಮೈ-ಆಸ್ಥಿತಿಯನ್ನು, ಮುಱ್ಱುಮದುಮ್-ಪೂರ್ಣವಾಗಿ, ಒೞಿವಿಲನ್-ಸನ್ತತವಾಗಿಯುಳ್ಳ, ಇತ್ತಾಯೋನ್-ಸ್ವಾಮಿಯೂ, (ಆದ

ಭಗವನ್ತನು); ಅಳಿವರುಮ್-ಉಪಕಾರಕವಾದ, ಅರುಳಿನೋಡು-ಕೃಪೆಯೊಡನೆ, ಅಮೈನ್ದು-ಕೂಡಿದವನಾಗಿ, ಅಕತ್ತನ್-(ಆಶ್ರಿತರಿಗೆ) ಅನ್ತರಂಗದಲ್ಲಿರುವವನು; (ಪುಱತ್ತನ್-ಇತರರಿಗೆ) ಬಾಹ್ಯನು.

( ಸ-ಗಾ-ರ || )—

ನಾನಾಜನ್ಮಸು ಚ ಸ್ವಯಂ ಕಿಲ ವಿಶನ್ನ್ಯತ್ಯಹೀನೋಽಸ್ಥಿರಃ
ಕಲ್ಯಾಣಾಮ್ಬುಧಿರಸ್ಯನಾದಿನಿಧನಃ ಪ್ರತ್ಯಕ್ಷತೇಜೋನಿಧಿಃ |
ಮೋಕ್ಷಜ್ಞಾನಫಲಪ್ರದಶ್ಚ ಸತತಂ ಸಾಕಲ್ಯತಶ್ಚೇಶ್ವರೋ
ಲೋಕಾನಾಮುಪಕಾರಕೋಽಸ್ತಿ ದಯಯಾ ಸ್ವೀಯೋಽಪಿ
ಬಾಹ್ಯೋಽಸ್ತ್ಯಸೌ||

ತಾ|| (ಸರ್ವೇಶ್ವರನ ಸೌಲಭ್ಯವನ್ನು ಸ್ಮರಿಸಿ ತಾವೇ ಚಿರಕಾಲ ಮೋಹಾವಿಷ್ಟರಾಗಿದ್ದ ಶಠಾರಿಮುನಿವರ್ಯರು ಪುನಃ ಪ್ರಬುದ್ಧರಾಗಿ ಇಲ್ಲಿ ಪರೋಪದೇಶವಂ ಮಾಡುತ್ತಾರೆ.) ಸರ್ವೇಶ್ವರನು ತನ್ನ ಸೌಲಭ್ಯದಿಂದ ನಾನಾಪ್ರಕಾರವಾದ ಅವತಾರಗಳನ್ನು ಮಾಡುವಾಗ ಒಂದುವಿಧವಾದ ಸ್ಥಿತಿಯೂ ನಿಯತಿಯೂ ಇಲ್ಲದವನಾಗಿದ್ದಾಗ್ಯೂ ಆದ್ಯಂತವಿಲ್ಲದ ಪರಿಪೂರ್ಣ ಕಲ್ಯಾಣಗುಣಗಳುಳ್ಳವನಾಗಿ ದಿವ್ಯತೇಜೋನಿಧಿಯಾಗಿ, ಯಾವಾಗಲೂ ಮೋಕ್ಷಜ್ಞಾನಫಲಪ್ರದನಾಗಿ ಏಕವಿಧಸ್ಥಿತಿಯುಳ್ಳವನಾಗಿಯೂ ಚೆನ್ನಾಗಿ ಪ್ರಕಾಶಿಸುತ್ತಿದ್ದಾನೆ ಮತ್ತು ಸಕಲ ಲೋಕೋಪಕಾರಕವಾದ ತನ್ನ ಕೃಪಾಗುಣದಿಂದ ಆಶ್ರಿತರಿಗೆ ಅನ್ತರಂಗಪ್ರಿಯನಾಗಿಯೂ, ಅನಾಶ್ರಿತರಿಗೆ ಬಾಹ್ಯನಾಗಿ (ದುರ್ಲಭನಾಗಿ)ಯೂ ಇರುತ್ತಾನೆ.

(೫) ಅಮೈವುಡೈಯಱನೆಱಿ ಮುೞುವದುಮ್ ಉಯರ್ವಱ ಉಯರ್ನ್ದು
ಅಮೈವುಡೈ ಮುದಲ್ಕೆಡಲೊಡಿವಿಡೈಯಱ ನಿಲಮದುವಾಮ್
ಅಮೈವುಡೈ ಯಮರರುಮ್ ಯಾವೈಯುಮ್ ಯಾವರುಮ್
ತಾನಾಮ್
ಅಮೈವುಡೈ ನಾರಣನ್ ಮಾಯೈಯೈ ಯಱಿಪವರ್ಯಾರೇ.

ಪ್ರ|| ಅಮೈವು - ಔಚಿತ್ಯವನ್ನು (ಪೂರ್ತಿಯನ್ನು), ಉಡೈ - ಹೊಂದಿರುವ, ಅಱನ್-ಧರ್ಮದ, ನೆಱಿಮುೞುವದುಮ್-ಉತ್ತಮವಾದಮಾರ್ಗದಲ್ಲಿ, ಉಯರ್ವಱ ಉಯರ್ನ್ದು - ಅತ್ಯುನ್ನತಸ್ಥಿತಿಯನ್ನು ಪಡೆದಿರುವ ; ಅಮೈವು - ಔಚಿತ್ಯವನ್ನು, ಉಡೈ-ಪಡೆದಿರುವ, ಮುದಲ್ಕೆಡಲ್-ಸೃಷ್ಟಿಸಂಹಾರಗಳೂ, ಇಡೈ ಒಡಿವು-ಅವಾ

ನ್ತರಪ್ರಳಯವ್ಮೂ, ಅಲ್ಲ-ಅಧಿಕವಾಗಿ, ನಿಲಮದು ಆಮ್-ತಮ್ಮ ಅಧಿಕಾರಸ್ಥಾನಗಳಾಗಿಯುಳ್ಳ ; ಅಮ್ಮೈವು - ಪೂರ್ತಿಯನ್ನು, ಉಡೈ-ಪಡೆದಿರುವ, ಅಮರರುಮ್-ಬ್ರಹ್ಮಾದಿದೇವತೆಗಳೂ, ಯಾವೈಯುಮ್-ಎಲ್ಲಾ ಅಚೇತನವಸ್ತುಗಳೂ, ಯಾವರುಮ್-ಎಲ್ಲಾ ಚೇತನರೂ, ತಾನ್ ಆಮ್-ತಾನೇ ಆಗುವಂತೆ, ಅಮ್ಮೈವು-ಪೂರ್ತಿಯನ್ನು, ಉಡೈ-ಹೊಂದಿರುವ, ನಾರಣನ್-ನಾರಾಯಣನ, ಮಾಯೈಯೈ-ಅವತಾರದ ಆಶ್ಚರ್ಯವನ್ನು, ಅಱಿಪವರ್-ತಿಳಿಯಲು ಶಕ್ತರಾದವರು, ಯಾರ್-ಯಾರು ?

( ಸ-ಗಾ-ರ ॥ )—

**ಪೂರ್ಣಂ ಧರ್ಮಮವಾಪ್ಯ ಉತ್ತಮಗತಿಂ ಪ್ರಾಪ್ತಾಶ್ಚ ಸರ್ಗಂ ಲಯಂ**
**ಕರ್ತುಂ ಚ ಪ್ರಭವೋಽಮರಾಸ್ತದಿತರೇ ಯೇ ಚೇತನಾಚೇತನಾಃ ।**
**ತೇ ಸರ್ವೇಽಪಿ ಸ ಏವ ಭಾತಿ ಭಗವಾನ್ನಾರಾಯಣಃ ಶ್ರೀಧರಃ**
**ಪೂರ್ಣಸ್ಸಿದ್ಧ ಇಹಾಸ್ಯ ಜನ್ಮಚರಿತೇ ಮಾಯಾನ್ನು ಕೋ ವೇತ್ತಿ ವಾ? ॥**

ತಾ॥ ಸಂಪೂರ್ಣವಾದ ಧರ್ಮವನ್ನು ಹೊಂದಲು ಉತ್ತಮವಾದ ಮಾರ್ಗವನ್ನು ಪಡೆದವರಾಗಿಯೂ, ಸೃಷ್ಟಿಪ್ರಳಯಗಳಿಗೆ ಅಧಿಕಾರಿಗಳಾಗಿಯೂ ಇರುವ (ಬ್ರಹ್ಮರುದ್ರಾದಿ) ದೇವತೆಗಳೂ, ಇತರ ಚೇತನಾಚೇತನವಸ್ತುಗಳೂ—ಇವೆಲ್ಲವೂ ತಾನೇ ಆಗಿರುವಂತೆ ಸಂಪೂರ್ಣವೈಭವನಾಗಿರುವ ಶ್ರೀಮನ್ನಾರಾಯಣನ ದಿವ್ಯಾವತಾರದ ಆಶ್ಚರ್ಯವನ್ನು (ರಹಸ್ಯವನ್ನು) ಯಾರುತಾನೇ ತಿಳಿಯಬಲ್ಲರು ?

(೪) ಯಾರುಮೋರ್ ನಿಲೈಮೈಯನ ಎನವುಣರ್ವರಿಯ ಎಮ್ಬೆರುಮಾನ್,
ಯಾರುಮೋರ್ ನಿಲೈಮೈಯನ ಎನವುಣರ್ವೆಳಿಯ ಎಮ್ಬೆರುಮಾನ್,
ಪೇರುಮೋರಾಯಿರಂ ಪಿಱಪಲವುಡೈಯ ಎಮ್ಬೆರುಮಾನ್,
ಪೇರುಮೋರುರುವಮುಂ ಉಳದಿಲ್ಲೈ ಇಲದಿಲ್ಲೈ ಪಿಣಕ್ಕೇ

ಪ್ರ॥ ಪೇರುಮ್-ನಾಮಧೇಯಂಗಳನ್ನೂ, ಪಿಱ (ನಾಮವಾಚ್ಯವಾಗಿ) ತದಿತರವಾದ ರೂಪಗಳನ್ನೂ, ಪಲವಾಯಿರಮ್-ಅನೇಕ ಸಹಸ್ರಸಂಖ್ಯಾಕವಾಗಿ, ಉಡೈಯ-ಪಡೆದಿರುವ, ಎಮ್ ಪೆರುಮಾನ್-ನನ್ನ ಸ್ವಾಮಿಯು (ಭಗವಂತನು); ಯಾರುಮ್-ಎಷ್ಟು ಜ್ಞಾನಾಧಿಕರಾಗಿದ್ದರೂ (ಅನಾಶ್ರಿತರಾಗಿದ್ದರೆ), ಓರ್ ನಿಲೈಮೈಯನ-ಒಂದು ಸ್ಥಿತಿಯುಳ್ಳವನು, ಎನ-ಎಂದು, ಉಣರ್ವು ಅರಿಯ-ತಿಳಿಯಲು ಶಕ್ತರಲ್ಲದೆ ಇರುವಂತೆ ತೋರುವ, ಎಮ್ ಪೆರುಮಾನ್-ನನ್ನ ಸ್ವಾಮಿಯು; ಯಾರುಮ್-ಎಷ್ಟು ಜ್ಞಾನಹೀನರಾಗಿದ್ದರೂ (ಆಶ್ರಿತರಾಗಿದ್ದರೆ), ಓರ್ ನಿಲೈಮೈಯನ-ಒಂದು ವ್ಯವಸ್ಥಿತವಾದ

ಸ್ವಭಾವವುಳ್ಳವನು, ಎನ–ಎಂದು, ಅಱಿವು ಎಳಿಯ–ತಿಳಿಯಲು ಶಕ್ತರಾಗಿರುವಂತೆ ತೋಱುವ, ಎಮ್ ಪೆರುಮಾನ್–ನನ್ನ ಸ್ವಾಮಿಯು; (ಇನ್ತಹ ಭಗವನ್ತನಿಗೆ) ಓರ್ ಪೇರುಮ್–ಒಂದು ನಾಮಧೇಯವೂ, ಓರ್ ಉರುವಮ್–ಒಂದು ರೂಪವೂ, ಉಳದಿಲ್ಲೈ–ಉಂಟಾಗಿಲ್ಲ (ಎಂದು ಪ್ರತಿಕೂಲರಾದ ನಾಸ್ತಿಕರಿಗೂ), ಇಲದಿಲ್ಲೈ–ಉಂಟಾಗಿಲ್ಲದೆ ಇಲ್ಲ–ಇದ್ದೇ ಇರುವುದು–(ಎಂದು ಅನುಕೂಲರಾದ ಆಸ್ತಿಕರಿಗೂ), ಪಿಣಕ್ಕೇ–ವಿವಾದವು (ನಿತ್ಯವಾಗಿ ಇದ್ದೇ ಇದೆ).

( ಸ–ಗಾ–ರ ॥ )—

**ನಾಥೋಽಯಂ ಮಮ ನಾಮರೂಪಶತಸಾಹಸ್ರಾವಳೀಭೃತ್ಸ್ವಯಂ**
**ಭಾತ್ಯೇಕಸ್ಸ್ವವಿಲಕ್ಷಣಸ್ತ್ವಿತಿ ವಿದುರ್ನೈವಂ ಬುಧಾ ನಾಸ್ತಿಕಾಃ ।**
**ಜಾನನ್ತ್ಯೇವ ಕಿಲಾಸ್ತಿಕಾಸ್ತು ತಮಿಮಂ ವಿದ್ಯಾವಿಹೀನಾ ಅಹೋ !**
**ರೂಪಂ ನಾಮ ಚ ನಾಸ್ಯ ಭಾತಿ ಕಿಲ ಭಾತೀತ್ಯೇವ ವಾದೋ ಮಿಥಃ ॥**

ತಾ॥ ನಮ್ಮ ಸ್ವಾಮಿಯಾದ ಭಗವನ್ತನು ಅನೇಕಸಹಸ್ರನಾಮ ರೂಪಗಳುಳ್ಳವನು. ಇವನನ್ನು ಅನಾಶ್ರಿತರಾದ ನಾಸ್ತಿಕರು (ಭಕ್ತಿಯಿಲ್ಲದವರು) ಎಷ್ಟು ಶಾಸ್ತ್ರಗಳನ್ನು ಓದಿ ಜ್ಞಾನಾಧಿಕರಾಗಿದ್ದರೂ ವಸ್ತುತಃ ತಿಳಿಯಲಾರರು; ಆಶ್ರಿತರಾದ ಆಸ್ತಿಕರು (ಭಕ್ತಿಯುಳ್ಳವರು) ಎಂತಹ ಶಾಸ್ತ್ರಜ್ಞಾನರಹಿತರಾಗಿದ್ದರೂ ತಿಳಿಯಬಲ್ಲರು. ಆದುದರಿಂದ ಭಗವನ್ತನಿಗೆ ನಾಮರೂಪಗಳಿಲ್ಲವೇ ಇಲ್ಲವೆಂದು ಹೇಳುವ ನಾಸ್ತಿಕರಿಗೂ, ನಾಮರೂಪಗಳಿದ್ದೇ ಇವೆಯೆಂದು ಹೇಳುವ ಆಸ್ತಿಕರಿಗೂ ಪರಸ್ಪರ ವಿವಾದವು ನಿತ್ಯವಾಗಿ ಇದ್ದೇ ಇದೆ.

(೫) ಪಿಣಕ್ಕಱ ಅಱುವಕೈಚ್ ಚಮಯಮುಂ ನೆಱಿಯುಳ್ಳಿಯುರೈತ್ತ
ಕಣಕ್ಕಱು ನಲತ್ತನನ್ದಮಿಲಾದಿಯಮ್ಬಗವನ್,
ವಣಕ್ಕುಡೈತ್ ತವನೆಱಿವೞಿನಿನ್ಱು ಪುಱನೆಱಿ ಕಳೈಕಟ್ಟು,
ಉಣಕ್ಕುಮಿನ್ ಪಸೈಯಱ ಅವನುಡೈಯುಣರ್ವು
ಕೊಣ್ಡುಣರ್ನ್ದೇ.

ಪ್ರ॥ ಅಱುವಕೈಚಮಯಮುಮ್–ಆರುವಿಧವಾದ ಸಮಯಗಳೂ (ಷಣ್ಮತಗಳೂ), ಪಿಣಕ್ಕು ಅಱ–ತಮ್ಮ ತಮ್ಮ ವಿವಾದಗಳನ್ನು ಬಿಡುವಂತೆ, ನೆಱಿ–ವೇದಮಾರ್ಗವನ್ನು, ಉಳ್ಳಿ–ಚೆನ್ನಾಗಿ ಪರಿಶೀಲಿಸಿ, ಉರೈತ್ತ–(ಗೀತಾದಿಶಾಸ್ತ್ರದ್ವಾರಾ) ಉಪದೇಶಿಸಿದ; ಕಣಕ್ಕು ಅಱು–ಸಂಖ್ಯಾತೀತವಾದ (ಅಸಂಖ್ಯಾತವಾದ), ನಲತ್ತ

ವನ್-ಕಲ್ಯಾಣಗುಣಗಳುಳ್ಳ; ಅನ್ದಮಿಲ್-ಅನ್ತವಿಲ್ಲದ, ಆದಿ-ಜಗತ್ಕಾರಣ ವಸ್ತುವಾದ, ಅಮ್-ಸರ್ವಲಕ್ಷಣಸಮ್ಪನ್ನನಾದ, ಬಗವನ್ - ಜ್ಞಾನಶಕ್ತ್ಯಾದಿ ಷಡ್ಗುಣ ವಿಶಿಷ್ಟನಾದ ಭಗವನ್ತನ, ವಣಕ್ಕು-ನಮಸ್ಕಾರಾದಿಗಳನ್ನು, ಉಡೈ-ಹೊಂದಿರುವ, ತವನೆಱಿ-ಭಕ್ತಿಪ್ರಪತ್ತಿಗಳ, ವೞಿ-ಮಾರ್ಗದಲ್ಲಿ, ನಿನ್ಱು-ನಿಂತು, ಪುಱನೆಱಿ-ಬೇರೆ ಮಾರ್ಗಗಳೆಂಬ, ಕಳೈ-ಕಳೆಗಳನ್ನು, ಕಟ್ಟು-ಕಿತ್ತುಹಾಕಿ, ಅವನುಡೈ - ಅವನ ವಿಷಯವಾದ, ಉಣರ್ವುಕೊಂಡು--ಭಕ್ತಿರೂಪ ಜ್ಞಾನದಮೂಲಕ, ಉಣರ್ನ್ದು-ಪರಿಶೀಲಿಸಿ, ಪಱ್ಱು - ಕರ್ಮವಾಸನಾರೂಪವಾದಪಾಶವು, ಅಱ-ನಾಶಹೊಂದುವಂತೆ, ಉಣಕ್ಕುಮಿನ್-ಒಣಗಿಸಿರಿ (ಅದನ್ನು ಧ್ವಂಸಮಾಡಿರಿ).

( ಸ-ಗಾ-ರ ॥ )—

**ಏವಂ ಷಟ್ಸಮಯೈಃ ಕೃತಾ ವಾದಸರಣಿರ್ನಶ್ಯೇದಿತಿ ಶ್ರೀಧರೋ**
**ವೇದಾನ್ತಾರ್ಥಸುಧಾರಸಂ ಹಿ ಭಗವಾನ್ ಕಲ್ಯಾಣಶೀಲೋಽಬ್ರವೀತ್ ।**
**ಆದಿಶ್ಚಾನ್ತವಿವರ್ಜಿತಃ ಕಿಲ ಹರಿಸ್ತದ್ಭಕ್ತಿಮಾರ್ಗಂ ಶುಭಂ**
**ಪ್ರಾಪ್ಯಾನನ್ಯಪರಾಯಣಾಶ್ಚ ಭವತ ಪ್ರಧ್ವಸ್ತಕರ್ಮಾಶಯಾಃ ॥**

ತಾ॥ ಈಪ್ರಕಾರ ಆರುಮತಗಳಿಗೂ ಇರುವ ಪರಸ್ಪರ ವಿವಾದಸರಣಿಯು ನಷ್ಟವಾಗುವಂತೆ ವೇದವೇದಾನ್ತ ಮಾರ್ಗವನ್ನು ಚೆನ್ನಾಗಿ ಪರಿಶೀಲಿಸಿ (ಗೀತಾದಿ ಶಾಸ್ತ್ರರೂಪದಿಂದ) ಉಪದೇಶಿಸಿದವನಾಗಿಯೂ, ಅಸಂಖ್ಯಾತ ಸಕಲಕಲ್ಯಾಣ ಗುಣ ವಿಶಿಷ್ಟನಾಗಿಯೂ, ಅನ್ತರಹಿತನಾದ ಜಗತ್ಕಾರಣವಸ್ತುವಾಗಿಯೂ ಇರುವ ಭಗವನ್ತನ ಪ್ರಣಾಮಾದಿಗಳೊಡನೆ ಕೂಡಿದ ಭಕ್ತಿಮಾರ್ಗದಲ್ಲಿ ಸ್ಥಿರವಾಗಿ ನಿಂತು, ಬಾಹ್ಯ ಮಾರ್ಗಗಳನ್ನು ಬಿಟ್ಟು, ಸಮೀಚೀನವಾದ ಭಗವದ್ ಜ್ಞಾನದಿಂದ ಚೆನ್ನಾಗಿ ಅವನ ಮಹಿಮೆಯನ್ನು ವಿವೇಚನೆಮಾಡಿ, ವಾಸನಾರೂಪವಾದ ಕರ್ಮಪಾಶವನ್ನು ಧ್ವಂಸ ಮಾಡಿರಿ.

(೬) ಉಣರ್ನ್ದುಣರ್ನ್ದಿೞಿನ್ದಕನ್ಱುಯರ್ನ್ದುರುವಿಯನ್ದ
ಇನ್ನಿಲೈಮೈ,
ಉಣರ್ನ್ದುಣರ್ನ್ದುಣರಿಲು ಮಿಱೈನಿಲೈ
ಯುಣರ್ವರಿ ದುಯಿರ್ಕಾಳ್,
ಉಣರ್ನ್ದುಣರ್ನ್ದುರೈತ್ತುರೈತ್ತರಿಯಯನರನೆನ್ನು
ಮಿವರೈ,
ಉಣರ್ನ್ದುಣರ್ನ್ದುರೈತ್ತುರೈತ್ತಿಱೈಞ್ಜುಮಿನ್
ಮನಪ್ಪಟ್ಟದೊನ್ಱೇ.

ಪ್ರ|| ಉಣರ್‍ನ್ದುಣರ್‍ನ್ದು – (ಚೇತನನು) ಜ್ಞಾತೃತ್ವವೇ ತನ್ನ ಸ್ವಭಾವವಾದುದರಿಂದ ಚೆನ್ನಾಗಿ ಪರಿಶೀಲಿಸುತ್ತ, ಇೞಿನ್ದು ಅಕನ್ಱು ಉಯರ್‍ನ್ದು– (ಆ ಜ್ಞಾನವು ಸರ್ವತೋಮುಖವಾದುದರಿಂದ) ಹತ್ತುದಿಕ್ಕುಗಳಲ್ಲಿಯೂ ವ್ಯಾಪಿಸಿ, ಉರು–ರೂಪವುಳ್ಳ ಅಚಿತ್ತಿಗಿಂತ, ವಿಯನ್ದ (ಇಯನ್ದ)–ವಿಲಕ್ಷಣವಾದ, ಇನ್ ನಿಲೈಮೈ–ಈ ಆತ್ಮಸ್ವರೂಪವನ್ನು, ಉಣರ್‍ನ್ದು–(ಶ್ರವಣದಿಂದ) ತಿಳಿದು, ಉಣರ್‍ನ್ದು–(ಮನನದಿಂದಲೂ) ತಿಳಿದು, ಉಣರಿಲುಮ್–(ಯೋಗದಿಂದ) ಸಾಕ್ಷಾತ್ಕರಿಸಿದರೂ, ಇಱೈನಿಲೈ–ಸರ್ವೇಶ್ವರನ ಸ್ಥಿತಿಯು (ಸರ್ವೇಶ್ವರನು ಬ್ರಹ್ಮರುದ್ರರನಡುವೆ ಗುಪ್ತನಾಗಿ ನಿಂತಿರುವ ಸ್ಥಿತಿಯು), ಉಣರ್ವು ಅರಿದು–ತಿಳಿಯಲಶಕ್ಯವಾದುದು; ಉಯಿರ್ಕಾಳ್!–ಚೇತನರೇ !, ಅರಿ–ಹರಿಯು, ಅಯನ್–ಅಜನು (ಬ್ರಹ್ಮನು), ಅರನ್–ಹರನು (ರುದ್ರನು), ಎನ್ನುಮ್ ಇವರೈ–ಎಂಬೀ ಮೂವರನ್ನೂ, ಉಣರ್‍ನ್ದು ಉಣರ್‍ನ್ದು–ಅವರವರ ಗುಣವಿಭೂತ್ಯಾದಿಗಳಿಂದ ಚಿರಕಾಲ ಪರಿಶೀಲಿಸಿ, ಉರೈತ್ತು ಉರೈತ್ತು–ತದ್ವಿಷಯಕವಾದ ಶಾಸ್ತ್ರಪ್ರಮಾಣಗಳನ್ನು ಪಠಿಸಿ ವಿಚಾರಮಾಡಿ, ಮನಪ್ಪಟ್ಟದು ಒನ್ಱು– (ಈ ಮೂವರಲ್ಲಿ ಯಾರು ಸರ್ವೇಶ್ವರನಾಗಿರಬಹುದೆಂದು) ಮನಸ್ಸಿನಲ್ಲಿ ವಿಚಾರಿಸಿ ನಿರ್ಣೀತವಾದ ವಸ್ತುವನ್ನೇ, ಉಣರ್‍ನ್ದುಣರ್‍ನ್ದು–ತದ್ಗುಣರೂಪಾದಿಗಳನ್ನು ಅನುಸನ್ಧಾನಮಾಡಿ, ಉರೈತ್ತುರೈತ್ತು – ತದ್ವಾಚಕವಾದ ಮನ್ತ್ರ ನಾಮ ಸ್ತೋತ್ರಾದಿಗಳನ್ನೇ ಪಠನಮಾಡುತ್ತ, ಇಱೈಞ್ಜುಮಿನ್ – ಭಜಿಸಿರಿ (ಉಪಾಸನೆ ಮಾಡಿರಿ).

( ಸ–ಗಾ. ೮ || )—

ಜ್ಞಾತೃತ್ವಾತ್ಸತತಂ ಚ ಚಿನ್ತನಪರಾಸ್ಸರ್ವಾಸು ದಿಕ್ಷು ಸ್ವಯಂ
ಜ್ಞಾನಸ್ಯ ಪ್ರಸರಂ ವಿರಚ್ಯ ಚ ಜಡಾದ್ವ್ಯಾವೃತ್ತಿಮೇತಾಂ ನಿಜಾಮ್ |
ನಿಶ್ಚಿತ್ಯ ಶ್ರವಣಾತ್ಪುನಶ್ಚ ಮನನಾದ್ಯೋಗಾಚ್ಚ ಮಧ್ಯಸ್ಥಿತಿಂ
ವಿಷ್ಣೋರ್ವಿತ್ಥ ಜನಾಸ್ತ್ರಿಮೂರ್ತಿಷು ! ಹೃದಾ ವಾಚಾ ಭಜಧ್ವಂ
ಪರಮ್ ||

ತಾ|| ಓ ಚೇತನರೇ ! ನಿಮಗೆ ಜ್ಞಾತೃತ್ವವೇ ಸ್ವಭಾವವಾದುದರಿಂದ ನೀವು ಸರ್ವದಿಕ್ಕುಗಳಲ್ಲಿಯೂ ಜ್ಞಾನಪ್ರಸರದಿಂದ ಆತ್ಮವಸ್ತುವು ಜಡವಸ್ತುವಿಗಿಂತ ವಿಲಕ್ಷಣವಾದುದೆಂದು ಚೆನ್ನಾಗಿ ಪರಿಶೀಲಿಸಿ, ಶ್ರವಣ ಮನನ ಯೋಗ (ನಿದಿಧ್ಯಾಸನ) ಗಳಿಂದ ಆತ್ಮಸಾಕ್ಷಾತ್ಕಾರವಂ ಪಡೆದಾಗ್ಯೂ, ಸರ್ವೇಶ್ವರನು ಸೃಷ್ಟಿಸಂಹಾರಕರ್ತರಾದ ಬ್ರಹ್ಮರುದ್ರರ ನಡುವೆ ಗುಪ್ತನಾಗಿ (ರಕ್ಷಣಕರ್ತನಾಗಿ) ನಿಂತಿರುವ ಸ್ಥಿತಿಯು (ನಿಮಗೆ) ತಿಳಿಯಲಶಕ್ಯವಾದುದು. ಆದುದರಿಂದ ಹರಿ, ಅಜ, ಹರ—ಎಂಬೀ

ಮೂವರ ಗುಣವಿಭೂತ್ಯಾದಿಗಳನ್ನೆಲ್ಲಾ ನೀವು ಚೆನ್ನಾಗಿ ಪರಿಶೀಲಿಸಿ ಶಾಸ್ತ್ರಪ್ರಮಾಣಗಳನ್ನೂ ಚಿರಕಾಲ ಪಠನಮಾಡಿ ವಿಚಾರಿಸಿ, ಈ ಮೂವರಲ್ಲಿ ಇವನೇ ಸರ್ವೇಶ್ವರನೆಂದು ನಿರ್ಣಯಿಸಿ ಇವನ ಗುಣವಿಗ್ರಹಾದಿಗಳನ್ನೇ ಅನುಸನ್ಧಾನಮಾಡುತ್ತ, ಇವನ ಮನ್ತ್ರ ನಾಮಸ್ತೋತ್ರಾದಿಗಳನ್ನೇ ಪಾರಾಯಣಮಾಡುತ್ತ, ಇವನನ್ನೇ ಭಜಿಸಿರಿ.

(೭) ಒನ್ಱೆನ ಪ್ಪಲವೆನ ಅಱಿವರುಮ್ ವಡಿವಿನುಳ್ ನಿನ್ಱ,
ನನ್ಱೆೞಿಲ್ ನಾರಣನ್ ನಾನ್ಮುಗನರನೆನ್ನುಮಿವರೈ,
ಒನ್ಱ ನುಮ್ಮನತ್ತು ವೈತ್ತುಳ್ಳಿ ನುಮ್ಮಿರುಪಶೈ ಯಱುತ್ತು,
ನನ್ಱೆನ ನಲಂ ಶೆಯ್ವದವನಿಡೈ ನಮ್ಮುಡೈ ನಾಳೇ.

ಪ್ರ॥ ಒನ್ಱು ಎನ-ಒಬ್ಬನೇ (ಮುಖ್ಯನು) ಎಂದೂ, ಪಲವೆನ – ಅನೇಕರು (ಮುಖ್ಯರು) ಎಂದೂ, ಅಱಿವು ಅರುಮ್-ತಿಳಿಯಲು ಅಶಕ್ಯವಾದ, ವಡಿವಿನುಳ್-ರೂಪದೊಳು, ನಿನ್ಱ-ನಿಂತಿರುವ, ನನ್ಱು-ವಿಲಕ್ಷಣವಾದ, ಎೞಿಲ್-(ಕಲ್ಯಾಣಗುಣಗಳಿಂದ) ಪ್ರಕಾಶಿಸುವ, ನಾರಣನ್ – ಶ್ರೀಮನ್ನಾರಾಯಣನು, ನಾನ್ಮುಗನ್-ಚತುರ್ಮುಖನು, ಅರನ್-ಹರನು (ರುದ್ರನು), ಎನ್ನುಮ್ ಇವರೈ-ಎಂದುಪ್ರಸಿದ್ಧರಾಗಿರುವ (ಶಾಸ್ತ್ರಪ್ರಮಾಣಗಳಿಂದ ಪ್ರಸಿದ್ಧರಾಗಿರುವ) ಇವರನ್ನು, ಒನ್ಱ-(ಪಕ್ಷಪಾತವಿಲ್ಲದಂತೆ) ಏಕಪ್ರಕಾರದಿಂದ, ನುಮ್ ಮನತ್ತು-ನಿಮ್ಮ ಮನಸ್ಸಿನಲ್ಲಿ, ವೈತ್ತು-ಇಟ್ಟು, ಉಳ್ಳಿ-(ಅವರ ಸ್ವರೂಪಸ್ವಭಾವಗಳನ್ನು) ಸಪ್ರಮಾಣವಾಗಿ ತಿಳಿದುಕೊಂಡು, ನುಮ್ ಇರುಪಶೈ-ನಿಮಗೆ ಇಬ್ಬರಲ್ಲಿರುವ (ಬ್ರಹ್ಮರುದ್ರರಲ್ಲಿರುವ) ಈಶ್ವರತ್ವ ಬುದ್ಧಿಯನ್ನು, ಅಱುತ್ತು-ಛೇದಿಸಿ (ತ್ಯಜಿಸಿ), ಅವನಿಡೈ -ಆಶ್ರೀಮನ್ನಾರಾಯಣನಲ್ಲಿಯೇ, ನಮ್ಮುಡೈ-ನಮ್ಮ, ನಾಳೇ-ದಿವಸಗಳಲ್ಲಿಯೇ (ಆಯುಃ ಪರಿಮಿತಿಕಾಲದಲ್ಲಿಯೇ), ನನ್ಱೆನ-ಸನಿಹಾಚೀನವಾದ, ನಲಮ್-ಪ್ರೀತಿಯನ್ನು (ಭಕ್ತಿಯನ್ನು), ಶೆಯ್ವದು-ಮಾಡಬೇಕು.

( ಸ-ಗಾ-ರ ॥ )—

**ಏಕಾನೇಕತಯಾಽಪಿ ಸಂಶಯಕರಾನ್ ನಾರಾಯಣಂ ತಂ ಚತು-**
**ರ್ವಕ್ತ್ರಂ ರುದ್ರಮಿಮಾನ್ ವಿಚಿನ್ತ್ಯ ಬಹುಧಾ ಯುಷ್ಮಾಕಂ ಹೃದಿ ಶ್ರೀಧರಮ್ ।**
**ತಂ ಪ್ರಾಪ್ತುಂ ಸಕಲಾನ್ಯಪಾಸ್ಯ ನನ್ಯಹೃದಯಾ ನಾರಾಯಣಂ ಸ್ವಾಮಿನಂ**
**ಯಾವತ್ತ್ವಾಯುರಿದಂ ನ ನಶ್ಯತಿ ತದಾ ಭಕ್ತಿಂ ಕುರುಧ್ವಂ ಪರಾಮ್ ॥**

ತಾ॥ (ಓ ಚೇತನರೇ!) ಒಂದೇ ಮೂರ್ತಿಯಿಂದೂ, ಅನೇಕ ಮೂರ್ತಿಗಳಿಂದೂ ಜನರು ನಾನಾ ಪ್ರಕಾರಗಳಲ್ಲಿ ಹೇಳುವುದರಿಂದ ನಿರ್ಣಯಿಸಲು ಅಶಕ್ಯವಾಗಿರುವ ರೂಪಗಳನ್ನು ಧರಿಸಿರುವ—ಶ್ರೀಮನ್ನಾರಾಯಣ–ಚತುರ್ಮುಖ–ರುದ್ರ

ರೆಂಬೀ ಮೂವರನ್ನೂ ನಿಷ್ಪಕ್ಷಪಾತವಾಗಿ ನೀವು ನಿಮ್ಮ ಮನಸ್ಸಿನಲ್ಲೇ ಪರೀಕ್ಷಿಸಿ ನೋಡಿ ಬ್ರಹ್ಮರುದ್ರರಲ್ಲಿ ನಿಮಗೆ ಇರುವ ಈಶ್ವರತ್ವಬುದ್ಧಿಯನ್ನು ಬಿಟ್ಟು, ಸರ್ವೇಶ್ವರನಾದ ಶ್ರೀಮನ್ನಾರಾಯಣನಲ್ಲಿಯೇ ಆಯುಃಪರಿಮಿತಿ ಇರುವವರೆಗೂ ನೀವು ಪರಿಪೂರ್ಣವಾದ ಭಕ್ತಿಯನ್ನು ಮಾಡಿರಿ.

(೮) ನಾಳುಂ ನಿನ್ಱಡು ನಮ ಪೞವೈ ಯಮ್ಕೊಡುವಿನೈ ಯುಡನೇ,
ಮಾಳುಮ್, ಓರ್ ಕುಱೈವಿಲ್ಲೈ ಮನನಕ ಮಲಮಱುಕ್ಕೞುವಿ,
ನಾಳುಂ ನಮ್ ತಿರುವುಡೈಯಡಿಕಳ್ ತನ್ನಲಂ ಕೞಲ್ ವಣಙ್ಗಿ,
ಮಾಳುಮೋರಿಡತ್ತಿಲುಮ್ ವಣಕ್ಕೊಡು ಮಾಳ್ವದು ವಲಮೇ.

ಪ್ರ|| ಮನ್ನ ಅಕಮ್-ಮನಸ್ಸೆಂಬ ಸ್ಥಾನವನ್ನು, ಮಲಮ್-ತ್ರಿಮೂರ್ತಿ ಸಾಮ್ಯಾಶಂಕೆಯಿಂದ ಉಂಟಾದ ಸಂಶಯವೆಂಬ ಮಲಿನದೋಷವು, ಅಱು-ನಾಶ ಹೊಂದುವಂತೆ, ಕೞುವಿ-(ವಿವೇಕದಿಂದ) ತೊಳೆದು, ನಾಳುಮ್ - ಪ್ರತಿದಿನವೂ, ನಮ್-ನಮ್ಮ ಭಾಗಕ್ಕೇಸೇರಿದ, ತಿರುವುಡೈ-ಶ್ರೀಮನ್ತನಾದ, ಅಡಿಕಳ್ ತಮ್-ಸ್ವಾಮಿಯ, ನಲಮ್-ಭೋಗ್ಯವಾದ, ಕೞಲ್-ಪಾದಗಳನ್ನು, ವಣಙ್ಗಿ-ಆಶ್ರಯಿಸಿದಲ್ಲಿ, ನಾಳುಮ್-ಪ್ರತಿದಿನವೂ, ನಿನ್ಱು-(ಬಿಡದೆ) ನಿಂತು, ಅಡುಮ್-ಸನ್ತಾಪಕರವಾದ, ನಮ್-ನಮ್ಮ, ಪೞವೈ-ಅನಾದಿಸಿದ್ಧವಾದ, ಅಮ್ ಕೊಡುವಿನೈ-ಅತಿಕ್ರೂರವಾದ ಪಾಪಗಳು, ಉಡನೇ-ಆಶ್ರಯಿಸುವ ಸಮಯದಲ್ಲಿಯೇ, ಮಾಳುಮ್-ನಾಶಹೊಂದುವುವು. ಓರ್‌ಕುಱೈವು ಇಲ್ಲೈ - ಒಂದು ಕೊರತೆಯೂ ಇಲ್ಲ. ಮಾಳುಮ್ ಓರಿಡತ್ತಿಲುಮ್-ಶರೀರವನ್ನು ಬಿಡುವ ಸಮಯದಲ್ಲೂ, ವಣಕ್ಕೊಡು-(ಪ್ರಪತ್ತಿರೂಪವಾದ) ಆಶ್ರಯಣದೊಡನೆ, ಮಾಳ್ವದು-ಮುಗಿಯೋಣವು, ವಲಮೇ-ಪ್ರಬಲವು (ಭಕ್ತಿಯೋಗಕ್ಕಿಂತಲೂ ಶ್ರೇಷ್ಠವಾದುದು).

( ಸ-ಗಾ-ರ || )—

**ಚೇತೋದೋಷಹರಾ ವಯಂ ಯದಿ ಹರೇಶ್ಶ್ರೀಶಸ್ಯ ಪಾದದ್ವಯಂ**
**ಪ್ರಾಪ್ತಾಸ್ಸನ್ತತತಾಪಕಾರಿದುರಿತಾವಳ್ಯಾಸ್ತು ನಾಶೋ ಭವೇತ್ |**
**ಇಷ್ಟಾರ್ಥೇಷು ನ ರಿಕ್ತತಾ ಕಿಲ ಭವೇತ್ ! ಕಾಯಸ್ಯ ವಿಶ್ಲೇಷತೋ**
**ನಿರ್ಯಾಣೇಽಸ್ತಿಮಕಾಲತೋಽಪಿ ಭಜನಂ ವಿಷ್ಣೋರ್ವರಂ ಸಾರ್ಥಕಮ್ ||**

ತಾ|| ಹೀಗೆ ತ್ರಿಮೂರ್ತಿಸಾಮ್ಯಾಶಂಕೆಯಿಂದ ಉಂಟಾದ ಮನಸ್ಸಿನ ಮಾಲಿನ್ಯ ವನ್ನು ನಾಶಪಡಿಸಿ ನಾವು ನಮಗೇ ಅಸಾಧಾರಣನಾಗಿ ಸೇವ್ಯನಾಗಿರುವ ಶ್ರೀಮ ನ್ನಾರಾಯಣನ ಚರಣಯುಗಳವನ್ನೇ ಸರ್ವಕಾಲದಲ್ಲೂ ಆಶ್ರಯಿಸಿದರೆ, ನಮಗೆ ಅನವರತ ಸನ್ತಾಪಜನಕವಾಗಿರುವ ಅನಾದಿಸಿದ್ಧವಾದ ನಮ್ಮ ಮಹಾಪಾಪಗಳೆಲ್ಲವೂ ಸಮಾಶ್ರಯಣಕಾಲದಲ್ಲಿಯೇ ನಾಶಹೊಂದುವುವು. ನಮಗೆ ಒಂದು ಕೊರತೆಯೂ ಇರುವುದಿಲ್ಲ. ಹೀಗೆ ಆಶ್ರಯಿಸುವ ವಿಷಯದಲ್ಲಿ ಕಾಲವಿಲಂಬವಾಯಿತೆಂಬ ಕೊರತೆ ಯನ್ನು ಬಿಟ್ಟು ಶರೀರ ವಿಶ್ಲೇಷಕಾಲದಲ್ಲಾದರೂ ಸಮಾಶ್ರಯಿಸೋಣವೇ (ಪ್ರಪತ್ತಿ ಮಾಡೋಣವೇ) --ಭಕ್ತಿಮಾರ್ಗಕ್ಕಿಂತ ಶ್ರೇಷ್ಠವಾದುದು.

(೯) ವಲತ್ತನನ್ ತಿರಿಪುರಮೆರಿತ್ತವನಿಡಮ್ ಪೆಱ ತ್ತುನ್ದಿ
ತ್ತಲತ್ತು, ಎಱುದಿಶೈಮುಕನ್ ಪಡೈತ್ತ ನಲ್ಲುಲಕಮುಮ್
ತಾನುಮ್,
ಪುಲಪ್ಪಡ ಪ್ಪಿನ್ನುಮ್ ತನ್ನುಲಕತ್ತಿಲಕತ್ತನನ್ ತಾನೇ
ಶೊಲಪ್ಪುಕಿಲಿವೈ ಪಿನ್ನುಮ್ ವಯಿಱ್ಱುಳ ಇವೈಯವನ್
ತುಯಕ್ಕೇ.

ಪ್ರ|| ಎಱು-(ಚತುರ್ದಶಲೋಕಾಧಿಪತ್ಯದಿಂದ) ಉಚ್ಛ್ರಾಯವನ್ನು ಪಡೆದಿ ರುವ, ದಿಶೈಮುಕನ್-ಚತುರ್ಮುಖನು, ಪಡೈತ್ತ-ಸೃಷ್ಟಿಸಿದ, ನಲ್ ಉಲಕಮುಮ್-ವಿಲಕ್ಷಣವಾದ ಪ್ರಪಂಚವೂ, ತಾನುಮ್-ತಾನೂ, ತುನ್ದಿತ್ತಲತ್ತು-ನಾಭಿತಲದಲ್ಲಿ, ಇಡಮ್‌ಪೆಱ-ಸ್ಥಲವನ್ನು ಪಡೆದಿರುವಲ್ಲಿ; ತಿರಿಪುರಮ್ ಎರಿತ್ತವನ್-ತ್ರಿಪುರದಹನ ವನ್ನು ಮಾಡಿರುವವನು (ರುದ್ರನು), ವಲತ್ತನನ್ – ಬಲಗಡೆಯಲ್ಲಿರುವವನು; ಪಿನ್ನುಮ್-ಮತ್ತೂ, ಅವನ್-ಆ ಸರ್ವೇಶ್ವರನು, ಪುಲಪ್ಪಡ-ಕಣ್ಣಿಗೆ ದೃಶ್ಯನಾಗು ವಂತೆ, ತಾನೇ-ತಾನೇ, ತನ್ ಉಲಕತ್ತಿಲ್ – ತನ್ನ ಲೋಕದಲ್ಲಿ, ಅಕತ್ತನನ್-(ಅವತರಿಸಿ) ಒಳಗೆ ಇರುವವನು. ಶೊಲಪ್ಪುಕಿಲ್-ಹೀಗೆ ಹೇಳಲು ನಾವು ಉದ್ದೇಶಿ ಸಿದರೆ, ಇವೈ-ಈ ಗುಣಗಳು, ಪಿನ್ನುಮ್-ಇನ್ನೂ, ವಯಿಱ್ಱುಉಳ-ಒಳಗೆ ಒಳಗೇ ಅಗಾಧವಾಗಿ ಕಾಣುವುವು. ಇವೈ ಅವನ್ ತುಯಕ್ಕು-ಇವುಗಳೆಲ್ಲಾ ಅವನ ಮಾಯೆ ಯೇ (ಅವನು ಮಾಡುವ ಅದ್ಭುತಕೃತ್ಯಗಳೇ).

( ಸ–ಗಾ–ರ || )—

ಬ್ರಹ್ಮಾ ಚಾಪಿ ಚತುರ್ಮುಖಸ್ಸ್ವಜಗತಾ ನಾಭೀಪುಟೇ ವರ್ತತೇ,
ರುದ್ರಶ್ಚ ತ್ರಿಪುರಾನ್ತಕಃ ಕಿಲ ಹರೇಃ ಪಾರ್ಶ್ವಂ ಶ್ರಿತೋ ದಕ್ಷಿಣಮ್ ।
ಪ್ರತ್ಯಕ್ಷೋಽಪಿ ಭವೇನ್ನಿಜೇ ತು ಜಗತಿ ಸ್ವಸ್ಯಾವತಾರಾದಸೌ ।
ಯದ್ಯುಚ್ಯೇತ ಹರೇಃ ಪ್ರಭಾವಜಲಧಿರ್ಭೂಯಾನಗಾಧೋಽದ್ಭುತಃ ||

ತಾ|| ಚತುರ್ದಶಲೋಕಗಳಿಗೂ ಅಧಿಪತಿಯಾಗಿ ಉನ್ನತಪದವಿಯಲ್ಲಿರುವ ಚತುರ್ಮುಖನು ತಾನು ಸೃಷ್ಟಿಸಿದ ಲೋಕಗಳೊಡನೆ ಸರ್ವೇಶ್ವರನಾದ ಶ್ರೀಮನ್ನಾರಾಯಣನ ನಾಭೀಪುಟದಲ್ಲಿ ಅಡಗಿ ಇರುತ್ತಾನೆ; ತ್ರಿಪುರದಹನವಂಮಾಡಿದ ರುದ್ರನು ಅವನ ಬಲಪಾರ್ಶ್ವದಲ್ಲಿ ಸೇರಿಕೊಂಡಿರುತ್ತಾನೆ. ಮತ್ತು ಆ ಸರ್ವೇಶ್ವರನು ಆಶ್ರಿತರ ಕಣ್ಣಿಗೆ ದೃಶ್ಯನಾಗುವಂತೆ ತಾನೇ ತನ್ನ ಪ್ರಪಂಚದಲ್ಲಿ ಅವತಾರಗಳನ್ನೂ ಮಾಡಿ ವಾಸಮಾಡುತ್ತಾನೆ. ಹೀಗೆ ನಾವು ಅವನ ಮಾಯಾಚೇಷ್ಟಿತಗಳನ್ನು ಹೇಳಲುಪಕ್ರಮಿಸಿದರೆ, ಅವನ ಗುಣಗಳು ಅತ್ಯದ್ಭುತವಾಗಿಯೂ ಅಗಾಧವಾಗಿಯೂ ಇನ್ನೂ ಒಳಗೆ ಒಳಗೆ ಗುಪ್ತವಾಗಿಯೇ ಕಾಣುವುವು. ಇವುಗಳೆಲ್ಲಾ ಅವನ ಅತ್ಯದ್ಭುತವಾದ ಮಾಯಾಚೇಷ್ಟಿತಗಳಾಗಿ ಲೋಕಗಳನ್ನೆಲ್ಲಾ ಭ್ರಮಿಸುವಂತೆ ಮಾಡುತ್ತವೆ.

(೧೦) ತುಯಕ್ಕಱು ಮದಿಯಿಲ್ ನಲ್ ಞಾನತ್ತುಳ್ಅಮರರೈ
ತ್ತುಯಕ್ಕುಮ್,
ಮಯಕ್ಕುಡೈ ಮಾಯೈಕಳ್, ವಾನಿಲುಮ್ ಪೆರಿಯನವಲ್ಲನ್,
ಪುಯಕ್ಕರು ನಿಱತ್ತನನ್ ಪೆರುನಿಲಙ್ಕಡನ್ದ ನಲ್ಲಡಿಪ್ಪೋದು,
ಅಯರ್ಪಿಲನಲಱ್ಱುವನ್ ತಱುವುವನ್ ವಣಙ್ಗುವನಮರ್ನ್ದೇ.

ಪ್ರ|| ತುಯಕ್ಕು ಅಱು-(ಸಂಶಯಾದಿ ಜನಿತ) ಕ್ಷೋಭವಿಲ್ಲದ, ಮದಿಯಿಲ್-ಮನಸ್ಸಿನಲ್ಲಿ (ಹುಟ್ಟಿದ), ನಲ್ಞಾನತ್ತುಳ್ - ಸಮೀಚೀನವಾದ ಜ್ಞಾನವುಳ್ಳ, ಅಮರರೈ-ದೇವತೆಗಳನ್ನೂ, ತುಯಕ್ಕುಮ್--ಭ್ರಮಿಸುವಂತೆ ಮಾಡುವ, ಮಯಕ್ಕು-ಮೋಹಜನಕ ಶಕ್ತಿಯನ್ನು, ಉಡೈ-ಪಡೆದಿರುವ, ಮಾಯೈಕಳ್-ತನ್ನ ಅದ್ಭುತ ಕೃತ್ಯಗಳು, ವಾನಿಲುಮ್-ಎಲ್ಲೆಯಿಲ್ಲದ ಆಕಾಶಕ್ಕಿಂತ, ಪೆರಿಯನವಲ್ಲ-ದೊಡ್ಡದಾಗುವಂತೆ ಮಾಡಬಲ್ಲ, ಪುಯಲ್-ನೀಲಮೇಘದಂತೆ, ಕರುನಿಱತ್ತನನ್-ಶ್ಯಾಮಲವರ್ಣನಾದ ಸ್ವಾಮಿಯ, ಪೆರುನಿಲಮ್-ಮಹಾಪೃಥಿವಿಯನ್ನು, ಕಡನ್ದ-ಅನಾಯಾಸದಿಂದ ಅಳೆದ, ನಲ್-ವಿಲಕ್ಷಣವಾದ, ಅಡಿಪ್ಪೋದು - ಚರಣಾರವಿನ್ದಗಳನ್ನು, ಅಮರ್ನ್ದು-(ಪ್ರಯೋಜನಾನ್ತರಗಳನ್ನು ಬಿಟ್ಟು) ಆಶ್ರಯಿಸಿ, ಅಯರ್ಪು ಇಲನ್-ವಿಸ್ಮೃತಿಯಿಲ್ಲದವನಾಗಿ, ಅಲಱ್ಱುವನ್ - ಅಕ್ರಮವಾಗಿ (ಅವನ ಗುಣಗಳನ್ನು) ಬಾಯಿನಿಂದ ಹೇಳುವೆನು, ತಱುವುವನ್-ಕೈಗಳಿಂದ ಆಲಿಂಗನಮಾಡುವೆನು, ವಣಙ್ಗುವನ್-ಶಿರಸ್ಸಿನಿಂದ ನಮಸ್ಕಾರಮಾಡುವೆನು.

( ಸ–ಗಾ–ರ ॥ )—

**ದಿವ್ಯಜ್ಞಾನಯುತಾನ್ ಸುರಾನಪಿ ಚ ಯಸ್ಸಮ್ಮೋಹಯತ್ಯಙ್ಗಸಾ**
**ಮಾಯಾಭಿರ್ದಿವಿ ಚಾಸಿತಾಮ್ಬುದನಿಭಸ್ತ್ರೈಲೋಕ್ಯಮಾನಪ್ರಭುಃ ।**
**ತಸ್ಯೈವಾಙ್ಘ್ರಿಸರೋಜಯುಗ್ಮಮನಿಶಂ ಭಕ್ತ್ಯಾ ಸ್ಮರನ್ ಕೀರ್ತಯನ್**
**ಸಂಶ್ಲಿಷ್ಯಾಪಿ ನಮೇಯಮಿತ್ಯಹಹ! ಮೇ ವಾಞ್ಛಾ ಸ್ವಯಂ ವರ್ಧತೇ ॥**

ತಾ॥ ಅಸಂಕುಚಿತವಾದ ದಿವ್ಯಜ್ಞಾನವುಳ್ಳ ದೇವತೆಗಳನ್ನೂ ಕೂಡ ಭ್ರಮಿಸುವಂತೆ ಮಾಡುವ ಅತ್ಯದ್ಭುತವಾದ ಮಾಯಾಕೃತ್ಯಗಳುಳ್ಳ ನೀಲಮೇಘಶ್ಯಾಮನಾದ ಭಗವಂತನ, ವಿಸ್ತೀರ್ಣವಾದ ಭೂಮಿಯನ್ನು ಅಳೆದ ಸುನ್ದರವಾದ ಪಾದಾರವಿನ್ದಗಳನ್ನೇ ಭಜಿಸಿ ಅನವರತ ಸ್ಮರಣವನ್ನೂ, ಕೀರ್ತನವನ್ನೂ, ಆಲಿಂಗನವನ್ನೂ, ನಮಸ್ಕಾರವನ್ನೂ ಮಾಡುವೆನು.

(೧೧) ಅಮರರ್ಕಳ್ ತೊೞುದೆೞ ವಲೈಕಡಲ್ ಕಡೈನ್ದವನ್ ತನ್ನೈ,
ಅಮರ್ ಪೊೞಿಲ್ ವಳವ್ ಕುರುಕೂರ್ ಚ್ಚಡಕೋಪನ್
ಕುಱ್ಱೇವಲ್ಕಳ್,
ಅಮರ್ ಶುವೈ ಯಾಯಿರತ್ತವಱ್ಱಿನುಳಿವೈಪತ್ತುಮ್
ವಲ್ಲಾರ್,
ಅಮರರೋಡುಯರ್ವಿಲ್ ಚ್ಚೆನ್ಱಱುವರ್ ತಮ್ ಪಿಱವಿ
ಯಞ್ಚಿಱೈಯೇ.

ಪ್ರ॥ ಅಮರರ್ಕಳ್ – ದೇವತೆಗಳು, ತೊೞುದು ಎೞ – ಸೇವಿಸಿ ವೃದ್ಧಿಯನ್ನು ಹೊಂದುವಂತೆ, ಅಲೈಕಡಲ್ – ಚಲಿಸುತ್ತಿರುವ ಕ್ಷೀರಸಮುದ್ರವನ್ನು, ಕಡೈನ್ದವನ್‌ತನ್ನೈ–ಮಥನಮಾಡಿದ ಸರ್ವೇಶ್ವರನನ್ನು ಕುರಿತು, ಅಮರ್–ಸಂಗತವಾಗಿರುವ, ಪೊೞಿಲ್‌ವಳಮ್–ವೃಕ್ಷಗಳ ರಮಣೀಯರಚನೆಯುಳ್ಳ, ಕುರುಕೂರ್–ಶ್ರೀ ಕುರುಕಾಪುರಿಯ ನಿರ್ವಾಹಕರಾದ, ಶಡಕೋಪರ್–ಶ್ರೀಶಠಾರಿಯ, ಕುಱ್ಱೇವಲ್‌ಕಳ್–ವಾಚಿಕಕೈಂಕರ್ಯರೂಪವಾದ, ಶುವೈ ಅಮರ್–ಶಬ್ದಸ್ವಾರಸ್ಯವೂ ಅರ್ಥಸ್ವಾರಸ್ಯವೂ ಹೊಂದಿರುವ, ಆಯಿರತ್ತು ಅವಱ್ಱಿನುಳ್-ಸಹಸ್ರಪದ್ಯಗಳಾದವುಗಳಲ್ಲಿ, ಇವೈಪತ್ತುಮ್–ಈ ಹತ್ತುಪದ್ಯಗಳನ್ನು, ವಲ್ಲಾರ್–ಅಭ್ಯಸಿಸುವವರು, ಅಮರರೋಡು–ನಿತ್ಯಸೂರಿಗಳೊಡನೆ, ಉಯರ್ವಿಲ್–ಪರಮಪದದಲ್ಲಿ, ಶೆನ್ಱು–ಸೇರಿ, ತಮ್ ಪಿಱವಿ–ತಮ್ಮ ತಮ್ಮ ಜನ್ಮಗಳೆಂಬ, ಅಮ್ ಶಿಱೈ–ಪ್ರಬಲವಾದ ಬನ್ಧವನ್ನು, ಅಱುವರ್–ಛೇದಿಸುವರು.

( ಸ-ಗಾ-ರ || )—

**ದೇವಾನಾಮಪಿ ಸೇವ್ಯಮಚ್ಯುತಮಿಮಂ ಪಾಥೋಧಿಮನ್ಥಪ್ರಭುಂ**
**ಸ್ತೋತುಂ ಶ್ರೀಹರಿಮೇವ ದಿವ್ಯಕುರುಕಾಪುರ್ಯಾಂ ಶಠಾರಿರ್ಮುನಿಃ |**
**ಕೈಙ್ಕರ್ಯಂ ಕಿಲ ವಾಚಿಕಂ ವ್ಯತನುತ ಶ್ರೀಸೂಕ್ತಿಸಾಹಸ್ರತ-**
**ಸ್ತತ್ರೇದಂ ದಶಕಂ ತನೋತಿ ಪಠತಾಂ ಮುಕ್ತಿಂ ಚ ಸೂರೀನ್ಸ್ರುತಾಮ್||**

ತಾ|| ದೇವತೆಗಳೆಲ್ಲರೂ ಸೇವಿಸಿ ಕೃತಾರ್ಥರಾಗುವಂತೆ ಸಮುದ್ರಮಥನವಂ ಮಾಡಿ ಅಮೃತವನ್ನು ಸಮ್ಪಾದಿಸಿ ಕೊಟ್ಟ ಶ್ರೀಮಹಾವಿಷ್ಣುವಾದ ಭಗವನ್ತನನ್ನು ಸ್ತೋತ್ರಮಾಡುವುದಕ್ಕಾಗಿ ಶ್ರೀಕುರುಕಾಪುರೀಶ್ವರರಾದ ಶಠಾರಿ ಮುನಿವರ್ಯರು ವಾಚಿಕಕೈಂಕರ್ಯರೂಪವಾಗಿ ರಚಿಸಿದ ಶಬ್ದಾರ್ಥಸ್ವಾರಸ್ಯಭರಿತವಾದ ಸಹಸ್ರ ಪದ್ಯ ಮಾಲೆಯೊಳು ಈ ದಶಕವನ್ನು ತಿಳಿದು ಪಠಿಸುವವರು ಭವಬನ್ಧಮುಕ್ತರಾಗಿ ಪರಮ ಪದದಲ್ಲಿ ನಿತ್ಯಸೂರಿಗಳೊಡನೆ ಸೇರಿ ಆನಂದಿಸುವರು.

---

( ದ್ರ-ಉ-ಸಂ || )—

**ದೂರಸ್ಥಮಪ್ಯರ್ಥ್ಯಮುನಿಃ ಕಮಲಾಸಹಾಯ-**
**ಮೈಚ್ಛೈಸ್ಸಮುದ್ಭವಶತೈಸ್ಸುಲಭೀಭವನ್ತಮ್ |**
**ಆಖ್ಯಾಯ ಭಕ್ತಿಮಪಿ ತತ್ರ ವಿಧಾಯ ತಸ್ಯ |**
**ಸೇವಾಂ ಚಕಾಂಕ್ಷ ಕರಣತ್ರಯತಸ್ತೃತೀಯೇ ||**

( ದ್ರ-ಉ-ತಾ-ರ || )—

**ಬನ್ಧಾರ್ಹತ್ವಾತ್ಸ್ವಭಕ್ತೈರಧಿಕತರಗುಣಾನನ್ತದಿವ್ಯಾವತಾರಾತ್ |**
**ಸರ್ವೇಷಾಮಾಸಕ್ತಿಮತ್ತ್ವಾನ್ನತಸುಗಮತಯಾ ಸ್ವಪ್ರಬೋಧಪ್ರದತ್ವಾತ್|**
**ಖ್ಯಾತಾಭಿಖ್ಯಾದಿಚಿಹ್ನಾತ್ಸ್ವರುಚಿವಿತರಣಾತ್ಸರ್ವಕಾಲಾಶ್ರಯತ್ವಾ-**
**ಚ್ಛರ್ವಾದೇಸ್ಸ್ವಾಙ್ಗದಾನಾತ್ಪ್ರಹಿತಪದತಯಾಽನನ್ತಸೌಲಭ್ಯಮಾಹ ||**

(ಈ ತೃತೀಯದಶಕದ ಸಾರಾಂಶ.)

ಈ ದಶಕದಲ್ಲಿ—ಸರ್ವೇಶ್ವರನಾದ ಭಗವನ್ತನನ್ನು ನೀಚತಮನಾದ ಚೇತನನು ಹೇಗೆ ಭಜಿಸಿ ಕೃತಾರ್ಥನಾಗುವನೆಂದು ಆಲೋಚಿಸಿ ಶ್ರೀ ಶಠಾರಿಮುನಿವರ್ಯರು ಭಗ ವನ್ತನಿಗೆ ತನ್ನ ಭಕ್ತರವಿಷಯದಲ್ಲಿರುವ ಅತ್ಯನ್ತ ಸೌಲಭ್ಯವನ್ನು ಸಕಾರಣವಾಗಿಯೂ ಸಪ್ರಮಾಣವಾಗಿಯೂ ನಿರೂಪಿಸಿ ಕರಣತ್ರಯದಿಂದಲೂ ತತ್ಕೈಂಕರ್ಯವನ್ನು ಮಾಡಲು ಅಪೇಕ್ಷಿಸಿರುತ್ತಾರೆ.

---

ಶ್ರೀಃ

# ಪ್ರಥಮಶತಕದಲ್ಲಿ—ಚತುರ್ಥದಶಕ.

(ಅಂಶಿರ್‍ರೈಯ ಮಡನಾರಾಯ್)

## (ನಾಯಿಕಾವಸ್ಥಾ—ಪಕ್ಷಿಗಳಮೂಲಕ ಸನ್ದೇಶಪ್ರೇಷಣ)

---

(೧) ಅಂ ಶಿಱೈಯ ಮಡನಾರಾಯ್ಅಳಿಯತ್ತಾಯ್, ನೀಯುಮ್ನಿನ್
ಅಂ ಶಿಱೈಯ ಶೇವಲುಮಾಯ್ಆವಾವೆನ್ಱೆನಕ್ಕರುಳಿ,
ವೆಂ ಶಿಱೈಪ್ಪುಳ್ಳುಯರ್ತ್ತಾರ್ಕ್ಕೆನ್ ವಿಡುತೂದಾಯ್
ಚ್ಚೆನ್ಱಕ್ಕಾಲ್,
ವನ್ ಶಿಱೈಯಿಲವನ್ವೈಕ್ಕಿಲ್ ವೈಪ್ಪುಣ್ಡಾಲೆನ್ಶೆಯ್ಯುಮೋ.

ಪ್ರ|| ಅಳಿಯತ್ತಾಯ್–ದಯಾಗುಣವುಳ್ಳ, ಅಮ್‌ಶಿಱೈಯ – ಸುನ್ದರವಾದ ರೆಕ್ಕೆಗಳುಳ್ಳ, ಮಡಮ್–(ಪುರುಷಸಂಗಮದಿಂದ ತೋರುವ) ಮದವುಳ್ಳ, ನಾರಾಯ್–ನಾರಾಯ್–ಎಂಬ ಸ್ತ್ರೀಪಕ್ಷಿಯೇ ! , ನೀಯುಮ್ – ನೀನೂ, ನಿನ್–ನಿನ್ನ, ಅಮ್‌ಶಿಱೈಯ–ಸುನ್ದರವಾದ ರೆಕ್ಕೆಗಳುಳ್ಳ, ಶೇವಲುಮ್ ಆಯ್–ಪುರುಷಪಕ್ಷಿಯೊಡನೆ ಕೂಡಿ, ಆವಾ ಎನ್ಱು–(ನನ್ನ ವಿರಹಸನ್ತಾಪವನ್ನು ನೋಡಿ) ಅಯ್ಯೋ ! ಅಯ್ಯೋ ! ಎಂದು, ಎನಕ್ಕು ಅರುಳಿ–ನನ್ನ ವಿಷಯದಲ್ಲಿ ಕೃಪೆಮಾಡಿ, ವೆಮ್‌ಶಿಱೈ–(ವಿರೋಧಿ ನಿರಸನದಲ್ಲಿ) ತೀವ್ರವಾಗಿ ಭಯಂಕರವಾದ ರೆಕ್ಕೆಗಳುಳ್ಳ, ಪುಳ್–ಪಕ್ಷಿಯಾದ ಗರುಡನನ್ನು, ಉಯರ್ತ್ತಾರ್ಕ್ಕು–ಧ್ವಜವಾಗಿ ಎತ್ತಿಕೊಂಡಿರುವ ಸರ್ವೇಶ್ವರನಿಗೆ, ಎನ್–ನನ್ನಿಂದ, ವಿಡು–ಬಿಡಲ್ಪಟ್ಟ, ತೂದು ಆಯ್–ದೂತಿಯಾಗಿ, ಶೆನ್ಱಕ್ಕಾಲ್–ಹೋದರೆ, ಅವನ್–ಆಸರ್ವೇಶ್ವರನು, ವನ್‌ಶಿಱೈಯಿಲ್–ಕ್ರೂರವಾದ ಬನ್ಧನದಲ್ಲಿ, ವೈತ್ತಾಲ್–(ನಿನ್ನನ್ನು) ಇಟ್ಟರೆ, ವೈಪ್ಪುಉಣ್ಡಾಲ್ - (ನೀನು) ಆ ಬನ್ಧನಕ್ಕೆ ಒಳಪಟ್ಟಿದ್ದರೆ, ಎನ್ಶೆಯ್ಯುಮೋ ! ಅದು (ನಿನಗೆ) ಏನು ಕೊರತೆಯುಂಟುಮಾಡುವುದೋ ? (ಅದರಿಂದ ನಿನಗೇನು ಹಾನಿಯುಂಟಾಗುವುದೋ ? ಯಾವ ಹಾನಿಯೂ ಇಲ್ಲವೆಂದು ಭಾವವು).

( ಸ-ಗಾ-ರ || )—

**ನಿತ್ಯಂ ಚೋಪಕೃತಿಪ್ರಸಕ್ತಹೃದಯಾ ತ್ವಂ ಹೇ ಬಲಾಕಾಹ್ವಯೇ !**
**ಮತ್ವಾ ನಾಯಕಸಂಗಮಾತ್ಕಿಲ ! ಕೃಪಾಂ ತ್ವಂ ಹನ್ತ ! ಕೃತ್ವಾ ಮಯಿ !**
**ದೂತೀಭೂಯ ಸನಾಯಕಾಽದ್ಯ ಗರುಡಾರೂಢಂ ಪ್ರಭುಂ ಯಾಹಿ ಮೇ,**
**ಬನ್ಧೇ ತತ್ರ ಧೃತಾಽಸಿ ಚೇನ್ನ ಹಿ ಭಯಂ ! ಸಾಹ್ಯಂ ತು ಮೇ ತ್ವಂ ಕುರು||**

ತಾ|| (ಭಗವನ್ತನ ವಿಶ್ಲೇಷವನ್ನು ಸಹಿಸಲಾರದೆ ಶ್ರೀಶಠಾರಿಯು ನಾಯಿಕಾ ರೂಪದಿಂದ ತಾನು ತನ್ನ ಅವಸ್ಥೆಯನ್ನು ನಾಯಕನಾದ ಭಗವನ್ತನಿಗೆ ತಿಳಿಯಪಡಿಸುವುದಕ್ಕಾಗಿ ಕೆಲವು ಪಕ್ಷಿಗಳನ್ನು ದೂತಕೃತ್ಯದಲ್ಲಿ ಪ್ರೇರಿಸುವ ಭಾವವು ಇಲ್ಲಿ ವ್ಯಕ್ತವಾಗಿದೆ.) ನನ್ನಲ್ಲಿ ದಯೆಯುಳ್ಳ ನಾರಾಯ್ ಎಂಬ ಸ್ತ್ರೀಪಕ್ಷಿಯೇ ! ನೀನೂ ನಿನ್ನ ಕಾನ್ತನಾದ ಪುರುಷಪಕ್ಷಿಯೊಡನೆ ಕೂಡಿ, ನನ್ನ ವಿರಹಸನ್ತಾಪವನ್ನು ನೋಡಿ ಅಯ್ಯೋ! ಎಂದು ಕೃಪೆಮಾಡಿ, ಗರುಡಧ್ವಜನಾದ ಸರ್ವೇಶ್ವರನ ಸನ್ನಿಧಿಗೆ ನನ್ನ ದೂತಿಯಾಗಿಹೋದರೆ, ಅಲ್ಲಿ ನಿನಗೆ ಬನ್ಧನವು ಉಂಟಾದರೆ, ಆ ಬನ್ಧನದಿಂದ ನಿನಗೇನು ಹಾನಿಯುಂಟಾಗುವುದು ? (ಅದರಿಂದ ಯಾವ ಭಯವೂ ಇಲ್ಲ. ಅನ್ತಹ ಬನ್ಧನವೂ ಕೂಡ ಸರ್ವೋತ್ತಮವಾದ ಸದ್ಗತಿಯಾದುದರಿಂದ ನೀನು ನನಗೆ ಈ ಉಪಕಾರವನ್ನು ಮಾಡು ಎಂದು ತಾತ್ಪರ್ಯ.)

(೨) ಎನ್ಶೆಯ್ಯ ತಾಮರೈಕ್ಕಣ್ ಪೆರುಮಾನಾರ್ಕ್ಕೆನ್ ತೂದಾಯ್,
ಎನ್ಶೆಯ್ಯುಮುರೈತ್ತಕ್ಕಾಲಿನಕ್ಕುಯಿಲ್ಕಾಳ್ ನೀರಲಿರೇ,
ಮುನ್ಶೆಯ್ದ ಮುೞುವಿನೈಯಾಲ್, ತಿರುವಡಿಕ್ಕೀೞ್
ಕುಱ್ಱೇವಲ್
ಮುನ್ಶೆಯ್ಯ ಮುಯಲಾದೇನಕಲ್ವದುವೋ ವಿದಿಯಿನಮೇ.

ಪ್ರ|| ಇನಕ್ಕುಯಿಲ್ಕಾಳ್-ಗುಂಪುಗುಂಪಾಗಿ ಸೇರಿರುವ ಕೋಕಿಲಪಕ್ಷಿಗಳೇ, ನೀರ್ ಅಲಿರೇ-ಶ್ರಾವ್ಯವಾದ ವಚನಗಳುಳ್ಳವರಲ್ಲವೇ ನೀವುಗಳು ! ಎನ್-ನನ್ನ, ಶೆಯ್ಯತಾಮರೈ-ಕೆಂದಾವರೆಯಂತಿರುವ, ಕಣ್-ನೇತ್ರಗಳುಳ್ಳ, ಪೆರುಮಾನಾರ್ಕ್ಕು-ಸ್ವಾಮಿಗೆ, ಎನ್ ತೂದಾಯ್-ನನ್ನ ದೂತಿಗಳಾಗಿ, ಉರೈತ್ತಕ್ಕಾಲ್-ಮಾತನಾಡಿದರೆ, ಎನ್ ಶೆಯ್ಯುಮ್-ಅದು ನಿಮಗೇನು ಹಾನಿಯನ್ನುಂಟುಮಾಡುವುದು ? ಮುನ್ ಶೆಯ್ದ-ಪೂರ್ವಜನ್ಮದಲ್ಲಿ ಮಾಡಿದ, ಮುೞುವಿನೈಯಾಲ್-ಮಹಾಪಾಪದಿಂದ, ತಿರುವಡಿಕ್ಕೀೞ್-(ಅವನ) ಚರಣಸನ್ನಿಧಿಯಲ್ಲಿ, ಕುಱ್ಱೇವಲ್-ಅನ್ತರಂಗಕೈಂಕರ್ಯವನ್ನು,

ಶೆಯ್ಯ – ಮಾಡುವುದಕ್ಕೆ, ಮುನ್ ಮುಯಲಾದೇನ್–ಪೂರ್ವದಲ್ಲಿ ಪ್ರಯತ್ನವನ್ನು ಮಾಡದೇಹೋದ ನಾನು, ಇನಿಮ್ (ಇನ್ನುಮ್) – ಇನ್ನೂ, ಅಕಲ್ವದುವೋ–ವಿಯೋಗದಿಂದ ಸಂತಾಪಪಟ್ಟು) ಹೀಗೆ ದೂರದಲ್ಲಿರೋಣವೋ, ವಿದಿ-(ನನ್ನ ಹಣೆಯಲ್ಲಿ ಬರೆದ) ವಿಧಿರೇಖೆಯು ?

( ಸ–ಗಾ–ರ || )—

**ಯೂಯಂ ವಾಗ್ಮಿನ ಏವ ಕೋಕಿಲಗಣಾ ದೂತಾ ಭವಸ್ತೋ ಮಮ**
**ಶ್ರೀಕಾನ್ತಂ ಪ್ರಭುಮಮ್ಬುಜಾಕ್ಷಮುಚಿತಾಮುಕ್ತಿಂ ವದೇತ್ಯೈವ ಚೇತ್ |**
**ಹಾನಿಃ ಕಾ? ಮಮ ಪಾಪತೋ ಯದಿ ಪುರಾ ತತ್ಪಾದಸೇವಾಮಹಂ**
**ನ ಪ್ರಾಪಂ ಕಿಮಿಹಾಧುನಾಽಪಿ ಚ ತಥಾ ವಿಶ್ಲೇಷವಾನ್ ದುರ್ವಿಧೇಃ ||**

ತಾ|| ಎಲೈ ಕೋಕಿಲಪಕ್ಷಿಗಳೇ ! ನೀವು ಶ್ರಾವ್ಯವಾದ ವಚನಗಳುಳ್ಳವರಲ್ಲವೇ ! ಅಂಬುಜಾಕ್ಷನಾದ ನನ್ನ ಸ್ವಾಮಿಯನ್ನು ಕುರಿತು . ನೀವು ದೌತ್ಯವನ್ನು ವಹಿಸಿ ನನ್ನ ಪಕ್ಷವಾಗಿ ಒಂದು ಉಚಿತವಾದ ಮಾತನ್ನು ಆಡಿದರೆ, ಅದರಿಂದ ನಿಮಗೇನು ಕೇಡುಂಟಾಗುವುದು ? ನನ್ನ ಪುರಾಕೃತವಾದ ಮಹಾಪಾಪದಿಂದ ಅವನ ಚರಣಸನ್ನಿಧಿಯಲ್ಲಿ ಪೂರ್ವದಲ್ಲಿಯೇ ಅಂತರಂಗಕೈಂಕರ್ಯವನ್ನು ಮಾಡುವುದಕ್ಕೆ ನಾನು ಪ್ರಯತ್ನಮಾಡದೆಹೋದುದರಿಂದ, ಇನ್ನೂ ( ಈಗಲೂ) ಹೀಗೆ ದೂರದಲ್ಲಿಯೇ ಇದ್ದು ವಿರಹಸಂತಾಪವನ್ನು ಅನುಭವಿಸಬೇಕಾದುದೇ ನನ್ನ ಹಣೆಯಬರಹವೋ (ವಿಧಿಯೋ)?—(ಎಂಬೀ ಮಾತನ್ನು ಹೇಳಿರೆಂದು ತಾತ್ಪರ್ಯ )

(೩) ವಿದಿಯಿನಾಲ್ ಪೆಡ್ಮೈಮಣಕ್ಕುಮ್ ಮೆನ್ನಡೈಯ
ವನ್ನಙ್ಗಾಳ್,
ಮದಿಯಿನಾಲ್ ಕುಱಳ್ಮಾಣಾ ಯುಲಕಿರನ್ದ ಕಳ್ವರ್ಕ್ಕು,
ಮದಿಯಿಲೇನ್ ವಲ್ವಿನೈಯೇ ಮಾಳಾದೋವೆನ್ಱು. ಒರುತ್ತಿ
ಮದಿಯೆಲ್ಲಾಮುಳ್ ಕಲಙ್ಗಿ ಮಯಙ್ಗುಮಾಲೆನ್ನೀರೇ.

ಪ್ರ|| ವಿದಿಯಿನಾಲ್–ಭಾಗ್ಯದಿಂದ, ಪೆಡ್ಮೈಮಣಕ್ಕುಮ್–ಸ್ತ್ರೀಸಂಗಮವನ್ನು ಪಡೆದಿರುವ, ಮೆನ್‌ನಡೈಯ–ಮೃದುಗಮನವುಳ್ಳ, ಅನ್ನಙ್ಗಾಳ್–ಹಂಸಪಕ್ಷಿಗಳೇ ! ಮದಿಯಿನಾಲ್–ಬುದ್ಧಿಚಾತುರ್ಯದಿಂದ, ಕುಱಳ್‌ಮಾಣ್ ಆಯ್–ವಾಮನ ಬ್ರಹ್ಮಚಾರಿಯಾಗಿ, ಉಲಕು ಇರನ್ದ–ಲೋಕಗಳನ್ನು ಯಾಚಿಸಿದ, ಕಳ್ವರ್ಕ್ಕು–ಕಪಟವೇಷವುಳ್ಳ ಸರ್ವೇಶ್ವರನಿಗೆ, ಮದಿಯಿಲೇನ್–ಬುದ್ಧಿಯಿಲ್ಲದ ನನ್ನ, ವಲ್‌ವಿನೈಯೇಯೋ–ಮಹಾಪಾಪವೋ, ಮಾಳಾದು – ಪರಿಹರಿಸಲಶಕ್ಯವಾದುದು ? ಓ ! ಎನ್ಱು–

ಅಯ್ಯೋ! ಎಂದು, ಒರುತ್ತಿ–ಒಂದುಸ್ತ್ರೀಯು, ಱುದಿ ಎಲ್ಲಾಮ್–ಬುದ್ಧಿಯೆಲ್ಲಾ, ಉಳ್‌ಕಲಙ್ಗಿ–ಮನಸ್ಸಿನಲ್ಲಿ ಕ್ಷೋಭವನ್ನು ಹೊಂದಿ, ಮಯಙ್ಗುಮ್–ಮೋಹಾವಿಷ್ಟೆಯಾಗಿದಾಳೆ, ಎನ್ನೀರ್–ಎಂದು ಹೇಳಿರಿ.

( ಸ–ಗಾ–ರ ‖ )—

**ಕಾನ್ತಾಸಙ್ಗಮಭಾಗ್ಯವೈಭವಯುತಾ ಹಂಸಾಸ್ತ್ವಯಂ ಮನ್ದಗಾ**
**ಯಾಯಾ ವಾಮನಮೇವ ವಞ್ಚಕಮಮುಂ ದೃಷ್ಟ್ವಾ ಮದೀಯಾಂ ದಶಾಮ್ |**
**ಬ್ರೂತ ಸ್ತ್ರೀ ಕಿಲ ಕಾಚಿದದ್ಯ ದುರಿತಂ ಕಿಂ ಮೇ ಮಹದ್ದುಸ್ಸಹಂ**
**ಹಾ ! ಹಾ ! ಹನ್ತ ! ನ ನಶ್ಯತೀತಿ ನಿತರಾಂ ಚಿತ್ತೇಽಸ್ತಿ ಸಮ್ಮೋಹಿತಾ ‖**

ತಾ‖ ಕಾನ್ತಾಸಂಗಮಭಾಗ್ಯದಿಂದ ಮೃದುಗಮನವುಳ್ಳ ಹಂಸಗಳಿರಾ! "ತನ್ನ ಬುದ್ಧಿಚಾತುರ್ಯದಿಂದ ವಾಮನಬ್ರಹ್ಮಚಾರಿಯಾಗಿ ಲೋಕಗಳನ್ನು ಯಾಚಿಸಿದ ವಂಚಕನಾದ ಸರ್ವೇಶ್ವರನಿಗೆ—ಅಯ್ಯೋ ! ಬುದ್ಧಿಯಿಲ್ಲದ ನನ್ನ ಪ್ರಬಲವಾದ ಪಾಪವೋ ಪರಿಹರಿಸಲಶಕ್ಯವಾದುದು ? "—ಎಂದು ಒಂದು ಸ್ತ್ರೀಯು ಚಿತ್ತಕ್ಷೋಭವಂ ಹೊಂದಿ ಸನ್ತಾಪದಿಂದ ಮೋಹಾವಿಷ್ಟೆಯಾಗಿದಾಳೆ—ಎಂದು ನನ್ನ ದಶೆಯನ್ನು ಆವನಿಗೆ ಹೇಳಿರಿ.

(೪) ಎನ್ನೀರ್ಮೈ ಕಣ್ಡಿರಙ್ಗಿ ಯಿದು ತಕಾದೆನ್ನಾದ,
ಎನ್ನೀಲಮುಕಿಲ್ ವಣ್ಣರ್ಕ್ಕೆಞ್ಞೊಲ್ಲಿ ಯಾಞ್ ಶೊಲ್ಲುಕೆನೋ,
ನನ್ನೀರ್ಮೈ ಯಿನಿಯವರ್‌ಕಣ್ ತಙ್ಗಾದೆನ್ಱೊರುವಾಯ್‌ಶೊಲ್,
ನನ್ನೀಲಮಕನ್ಱಿಲ್‌ಕಾಳ ನಲ್‌ಕುದಿರೋ ನಲ್‌ಕೀರೋ.

ಪ್ರ‖ ಎನ್ ನೀರ್ಮೈ–ನನ್ನ (ವಿಶ್ಲೇಷಾಸಹವಾದ) ಅತಿಕೋಮಲಸ್ವಭಾವವನ್ನು, ಕಣ್ಡು–ನೋಡಿ, ಇರಙ್ಗಿ–ಕೃಪೆಮಾಡಿ, ಇದು–(ಇನ್ತಹದಶೆಯಲ್ಲಿ ಇವಳನ್ನು ಬಿಟ್ಟು ಹೋಗುವುದೆಂಬ) ಇದು, ತಕಾದು–ಉಚಿತವಲ್ಲ, ಎನ್ನಾದ–ಎಂದು ನೆನೆಯದ, ಎನ್–ನನ್ನ, ನೀಲಮುಕಿಲ್–ನೀಲಮೇಘದ, ವಣ್ಣರ್ಕ್ಕು–ವರ್ಣವುಳ್ಳ ಭಗವನ್ತನಿಗೆ, ಎಞ್ಞೊಲ್ಲಿ– ಯಾವಮಾತನ್ನು ಹೇಳಿ, ಯಾಞ್ ಶೊಲ್ಲುಕೆನೋ–ನಾನು ಸಂಭಾಷಣ ಮಾಡುವೆನೋ ! ನಲ್‌ನೀರ್ಮೈ–ಒಳ್ಳೆಯ ಸದ್ಭಾವವು, ಇನಿ–ಇನ್ನುಮೇಲೆ, ಅವರ್ ಕಣ್–ಅವರ (ನನ್ನ ಸ್ವಾಮಿಯ) ವಿಷಯದಲ್ಲಿ, ತಙ್ಗಾದೆನ್ಱು–(ನನಗೆ) ನಿಲ್ಲಲಾರದೆಂದು, ಒರುವಾಯ್‌ಶೊಲ್–ಒಂದು ಮಾತು ಹೇಳೋಣದರಿಂದ, ನಲ್‌ಕುದಿರೋ ! (ನನಗೆ), ನೀವು ಉಪಕಾರವನ್ನು ಮಾಡುವಿರೋ!, ನಲ್‌ಕೀರೋ!--ಉಪಕಾರ ಮಾಡುವುದಿಲ್ಲವೋ ! ನಲ್ ನೀಲಮಕನ್ಱಿಲ್‌ಕಾಳ್–ಅತಿನೀಲವರ್ಣವುಳ್ಳ, ಗಂಡು ಅಕನ್ಱಿಲ್‌ಪಕ್ಷಿಗಳೇ !

( ಸ-ಗಾ-ರ || )—

**ವಿಶ್ಲೇಷಾಸಹತಾಂ ವಿಲೋಕ್ಯ ಚ ಮಮ ಸ್ವೈರಂ ಕೃಪಾಮಾನಸಾ**
**ನಾಸೀಕ್ಷಿಂ ಮಯಿ ನೀಲಮೇಘಸುತನುಶ್ಚೇತ್ಯೇವ ವಾಚಂ ಮಮ|**
**ಯೂಯಂ ಕೇ ಚನ ಪಕ್ಷಿಣೋ೭ದ್ಯ ಮನು ಸದ್ಭಾವೋ೭ಪಿ ತಸ್ಮಿನ್ ವಿಭೌ**
**ಕಾನ್ತೇ ನೈವ ಹಿ ತಿಷ್ಠತೀತಿ ವಚನಂ ಬ್ರೂಥೈವ ವಾ? ನೈವ ವಾ ? ||**

ತಾ|| ಎಲೈ ಅತಿ ನೀಲವರ್ಣವುಳ್ಳಗಂಡು ಅನ್ರಿಲ್ ಪಕ್ಷಿಗಳಿರಾ | ವಿಶ್ಲೇಷ ವನ್ನು ಸಹಿಸಲಾರದ ನನ್ನ ಅತಿಕೋಮಲ ಸ್ವಭಾವವನ್ನು ಕಂಡು, ಇನ್ತಹ ಸಮಯ ದಲ್ಲಿ ಇವಳನ್ನು ಬಿಟ್ಟು ಹೋಗುವುದು ಉಚಿತವಲ್ಲವೆಂದು ನೆನೆಯದೆ (ದೂರದಲ್ಲಿ) ಇರುವ ನೀಲಮೇಘಶ್ಯಾಮನಾದ ನನ್ನ ಸ್ವಾಮಿಗೆ ನಾನು ಯಾವಮಾತನ್ನು ಹೇಳಿ ಕಳುಹಿಸಬಲ್ಲೆ ? "ನಿಮ್ಮ ವಿಷಯದಲ್ಲಿ ಅವಳ ಸದ್ಭಾವವು ಇನ್ನುಮೇಲೆ ನಿಲ್ಲ ಲಾರದು"—ಎಂಬೀ ಒಂದು ಮಾತನ್ನು ಅವರಿಗೆ ಹೇಳಿ ನನಗೆ ಉಪಕರಿಸುವಿರೋ? ಇಲ್ಲವೋ? (ಎಂದು ಭಾವವು.)

(೫) ನಲ್‌ಕಿತ್ತಾನ್ ಕಾತ್ತಳಿಕ್ಕುಂ ಪೊೞಿಲೇೞುಮ್ ವಿನೈಯೇತ್ಕ್ಕ,
ನಲ್‌ಕ ತ್ತಾನಾಕಾದೋ ! ನಾರಣನೈ ಕ್ಕಣ್ಡಕ್ಕಾಲ,
ಮಲ್‌ಕು ನೀರ್ ಪುನಲ್‌ಪಡಪ್ಪೈ ಯಿರೈತೇರ್ ವಣ್
ಶಿಱುಕುರುಕೇ,
ಮಲ್‌ಕುನೀರ್ ಕಣ್ಣೇಱ್ಕ್ಕೋರ್ ನಾತಕಮ್ ಕೊಣ್ಡರುಳಾಯೇ.

ಪ್ರ|| ನಲ್‌ಕಿ-ಕೃಪೆಮಾಡಿ, ತಾನ್-ತಾನೇ, ಕಾತ್ತು-ಅನಿಷ್ಟನಿವಾರಣವಂ ಮಾಡಿ, ಪೊೞಿಲೇೞುಮ್ -ಸಪ್ತಲೋಕಗಳನ್ನೂ, ಅಳಿಕ್ಕುಮ್ - (ಇಷ್ಟಾರ್ಥಗ ಳನ್ನುಕೊಟ್ಟು) ರಕ್ಷಿಸುವನು, ವಿನೈಯೇತ್ಕ್ಕಯೋ-ಪಾಪಿಯಾದ ನನಗೆ ಮಾತ್ರವೋ, ತಾನ್ ನಲ್‌ಕ ಆಕಾದು-ತಾನು ಕೃಪೆಮಾಡಲಾಗದು ?—(ಎಂದು) ನಾರಣನೈ- ಸರ್ವರಕ್ಷಕನಾದ ಶ್ರೀಮನ್ನಾರಾಯಣನನ್ನು, ಕಣ್ಡಕ್ಕಾಲ್ - ಕಣ್ಡಾಗ, ಮಲ್ ಕುಮ್ - ಉತ್ಕಟವಾಗಿ ಪ್ರವಹಿಸುವ, ನೀರ್-ಸ್ವಭಾವವುಳ್ಳ, ಪುನಲ್-ನೀರಿನ ಕಾಲುವೆಗಳುಳ್ಳ, ಪಡಪ್ಪೈ - ಪುಷ್ಪೋದ್ಯಾನಗಳಲ್ಲಿ, ಇರೈತೇರ್ - ಆಹಾರವನ್ನು ಹುಡುಕುತ್ತಿರುವ, ವಣ್‌ಶಿಱುಕುರುಕೇ!-ರಮ್ಯವಾದ ಚಿಕ್ಕಕುರುಕು ಎಂಬ ಪಕ್ಷಿಯೇ! ಮಲ್‌ಕುಮ್-ಪೂರ್ಣವಾದ, ನೀರ್-ನೀರುಳ್ಳ, ಕಣ್ಣೇಱ್ಕ್ಕು - ಕಣ್ಣುಗಳುಳ್ಳ ನನ ಗೋಸ್ಕರ, ಓರ್‌ನಾತಕಮ್‌ಕೊಣ್ಡು - ಒಂದುಮಾತನ್ನು ತೆಗೆದುಕೊಂಡುಹೋಗಿ ಸರ್ವೇಶ್ವರನಿಗೆ ಹೇಳಿ, ಅರುಳಾಯ್-ಕೃಪೆಮಾಡು.

( ಸ-ಗಾ-ರ || )—

**ರಕ್ಷಿತ್ವಾ ಸ್ವಯಮೇವ ಸಪ್ತ ಭುವನಾನ್ಯಾಸ್ತೇ ಜಗನ್ನಾಯಕಃ**
**ಕಿಂ ಮಹ್ಯಂ ಬತ! ನೈವ ಭಾತಿ ಕೃಪಯಾ ನಾರಾಯಣಃ ಪಾಪತಃ ? |**
**ದೃಷ್ಟ್ವಾತ್ರ ತಂ ವದ ಸುನ್ದರಾಕೃತಿಧರೇ ! ಕ್ಷೇತ್ರೇಷು ಸಞ್ಚಾರಿಣಿ !**
**ಪ್ರೀತ್ಯಾ ತ್ವಂ ಕುರುಕಾಖ್ಯಪಕ್ಷಿಣಿ!ವಚಃ ಕಿಂಚಿತ್ಸಬಾಷ್ಪಾನ್ತು ಮಾಮ್||**

ತಾ|| ಪುಷ್ಪೋದ್ಯಾನಗಳಲ್ಲಿ ಆಹಾರವನ್ನು ಹುಡುಕುತ್ತಿರುವ ಚಿಕ್ಕ ಕುರು ಕೆಂಬ ಸುನ್ದರವಾದ ಪಕ್ಷಿಯೇ! "ಸಪ್ತಲೋಕಗಳನ್ನೂ ಅನಿಷ್ಟನಿವಾರಣಪೂರ್ವ್ವಕ ವಾದ ಇಷ್ಟಪೂರ್ತಿಯಿಂದ ರಕ್ಷಿಸುವ ಸರ್ವೇಶ್ವರನು ಪಾಪಿಯಾದ ನನ್ನನ್ನುಮಾತ್ರ ರಕ್ಷಿಸಲಾರನೋ?"–ಎಂಬೀ ನನ್ನ ಒಂದುಮಾತನ್ನು, ಸರ್ವರಕ್ಷಕನಾದ ಶ್ರೀಮ ನ್ನಾರಾಯಣನನ್ನು ಕಂಡಾಗ, ಸಬಾಷ್ಪಲೋಚನೆಯಾದ ನನಗೋಸ್ಕರ, ನೀನು ಕೃಪೆಮಾಡಿ ಹೇಳು.

(೬) ಅರುಳಾದ ನೀರರುಳಿ ಯವರಾವಿ ತುವರಾಮುನ್,
ಅರುಳಾಳಿ ಪ್ಪುಳ್ಕಡವೀರವರ್ವೀದಿ ಯೊರುನಾಳೆನ್ಱು,
ಅರುಳಾಳಿಯಮ್ಮಾನೈ ಕ್ಕಣ್ಡಕ್ಕಾಲಿದು ಶೊಲ್ಲಿ
ಅರುಳ್, ಆೞಿವರಿವಣ್ಡೇ ಯಾಮುಮೆನ್ಪಿೞೈತ್ತೋಮೇ.

ಪ್ರ|| ಆೞಿ–ವೃತ್ತಾಕಾರವಾದ, ವರಿ – ರೇಖೆಗಳುಳ್ಳ, ವಣ್ಡೇ–ಭ್ರಮರವೇ, (ದುಂಬಿಯೇ!), ಅರುಳ್–(ಆಶ್ರಿತರ ವಿಷಯದಲ್ಲಿ) ಕೃಪೆಯೊಡನೆ ಕೂಡಿದ, ಆೞಿ–ಚಕ್ರವುಳ್ಳ, (ಚಕ್ರವನ್ನು ಧರಿಸಿರುವ), ಅಮ್ಮಾನೈ–ಸ್ವಾಮಿಯಾದ ಭಗವನ್ತನನ್ನು, ಕಣ್ಡಕ್ಕಾಲ್-ಕಣ್ಡಾಗ,-"ಅರುಳಾದ ನೀರ್-ಇದುವರೆಗೂ ಕೃಪೆಮಾಡದಿರುವ ನೀವು, ಅರುಳಿ – ಈಗ ಕೃಪೆಮಾಡಿ, ಅವರ್ ಆವಿ-ಅವರ ಜೀವವು, ತುವರಾಮುನ್-ಶುಷ್ಕ ವಾಗಿ ನಾಶಹೊಂದುವುದಕ್ಕೆ ಮುಂಚೆ, ಅರುಳಾೞಿ–ಕೃಪಸಮುದ್ರನಾದ, ಪುಳ್–ಗರುಡ ನನ್ನು, ಅವರ್ವೀದಿ- ಅವರ ಬೀದಿಯಲ್ಲಿ, ಒರುನಾಳ್ – ಒಂದುದಿನವಾದರೂ, ಕಡವೀರ್ – ನಡೆಸಬೇಕು;" ಎನ್ಱು–ಎಂದು, ಇದು ಶೊಲ್ಲಿ–ಈ ಮಾತನ್ನು ಹೇಳಿ, ಅರುಳ್ – ಕೃಪೆಮಾಡು. "ಯಾಮುಮ್–ನಾವೂ, ಎನ್ಪಿೞೈತ್ತೋಮ್–ಯಾವ ತಪ್ಪನ್ನು ಮಾಡಿದೆವು ?"

( ಸ–ಗಾ–ರ ‖ )—

**ರಮ್ಯಸ್ತ್ವೇಚಿತಪತ್ರಝುಂಕೃತಿಯುತಸ್ತ್ವಂ ಭೃಂಗೇ ! ದೃಷ್ಟ್ವಾತ್ರ ಹರಿಂ**
**ನಾಥಂ ಭಕ್ತಕೃಪಾಳುಚಕ್ರಧರಮೇವೇದಂ ವಚೋ ಮೇ ವದ ।**
**ನಿಷ್ಕಾರುಣ್ಯಗುಣೋಽಸಿ ! ಜಾತು ಕೃಪಯಾ ತಸ್ಯಾಸ್ತು ಜೀವಾವಧೌ**
**ತದ್ವೀಧ್ಯಾಂ ಗರುಡಂ ಚ ತೇ ಗಮಯ ಭೋ ! ದೇವೇತಿ, ಕಿಂಮೇಽ**
**ಸ್ತ್ಯಘಮ್? ‖**

ತಾ॥ ಓ! ರಮ್ಯವಾದ ರೇಖೆಗಳುಳ್ಳ ಭ್ರಮರವೇ! ಆಶ್ರಿತರಕ್ಷಣಕ್ಕಾಗಿ ಚಕ್ರ ಧಾರಿಯಾಗಿರುವ ಸರ್ವೇಶ್ವರನನ್ನು ಕಂಡು ನನಗೋಸ್ಕರ ಈ ಮಾತನ್ನು ಹೇಳು— "ಇದುವರೆಗೂ ಅವಳ ವಿಷಯದಲ್ಲಿ ಕೃಪೆಮಾಡದೆ ಇರುವ ನೀವು ಈಗಲಾದರೂ ಕೃಪೆಮಾಡಿ, ಅವಳ ಪ್ರಾಣವು ಇರುವಾಗಲೇ ಅವಳ ಬೀದಿಯಲ್ಲಿ ಒಂದು ದಿನ ಗರುಡಾರೂಢರಾಗಿ ಸಂಚರಿಸಿ ಅವಳಿಗೆ ದರ್ಶನವನ್ನಾದರೂ ಕೊಡಬೇಕು." ಇಷ್ಟು ಮಟ್ಟಿಗೆ ಮಾಡಲು ಆ ಭಗವಂತನಿಗೆ ಇಷ್ಟವಿಲ್ಲದಪಕ್ಷದಲ್ಲಿ—ಸರ್ವರಕ್ಷಣದೀಕ್ಷಿತ ನಾದ ಅವನಲ್ಲಿ "ನಾವು ಮಾತ್ರ ಏನು ತಪ್ಪುಮಾಡಿದೆವು?" ಎಂದು ಕೇಳು (ಎಂದು ತಾತ್ಪರ್ಯ.)

(೭) ಎನ್ಪಿೞೈಕೋಪ್ಪದು ಪೋಲ ಪ್ಪನಿವಾಡೈ ಈರ್ಕಿನ್ಱ,
ಎನ್ಪಿೞೈಯೇ ನಿನೈನ್ದರುಳಿ ಅರುಳಾದ ತಿರುಮಾಲಾರ್ಕ್ಕು,
ಎನ್ಪಿೞೈತ್ತಾಳ್ ತಿರುವಡಿಯಿನ್ ತಕವಿನುಕ್ಕೆನ್ಱೊರುವಾಯ್
ಶೊಲ್,
ಎನ್ಪಿೞೈಕ್ಕುಮಿಳಙ್ಕಿಳಿಯೇ ಯಾನ್ ವಳರ್ತ್ತ ನೀಯಲೈಯೇ.

ಪ॥ ಎನ್ಪು (ಎನ್ಬು)–ಎಲುಬಿನಲ್ಲಿ, ಇೞೈ–ನೂಲಿನ ಎಳೆಯನ್ನು, ಕೋಪ್ಪದು ಪೋಲ–ಪೋಣಿಸುವಂತೆ, ಪನಿ ವಾಡೈ–ಶೀತಲವಾದ ಗಾಳಿಯು, ಈರ್ಕಿನ್ಱ(ದು)–(ನನ್ನನ್ನು) ಪೀಡಿಸುತ್ತಿದೆ. (ಹೀಗಿದ್ದಾಗ್ಯೂ) ಎನ್ಪಿೞೈಯೇ–ನನ್ನ ಅಪರಾಧವನ್ನೇ, ನಿನೈನ್ದರುಳಿ–ನೆನೆಸಿಕೊಂಡು, ಅರುಳಾದ–(ನನ್ನಲ್ಲಿ) ಕೃಪೆಮಾಡದೆ ಇರುವ, ತಿರುಮಾಲಾರ್ಕ್ಕು–ಶ್ರಿಯಃಪತಿಯಾದ ಭಗವಂತನಿಗೆ, ತಿರುವಡಿಯಿನ್–ಸ್ವಾಮಿಯಾದ ನಿಮ್ಮ, ತಕವಿನುಕ್ಕು–ಕೃಪಾಗುಣದ ವಿಷಯದಲ್ಲಿ, ಎನ್ಪಿೞೈತ್ತಾಳ್–ಇವಳು ಏನು ಅಪರಾಧಮಾಡಿದಳು, ಎನ್ಱು–ಎಂದು, ಒರುವಾಯ್–ಒಂದುಮಾತನ್ನು, ಶೊಲ್–ಹೇಳು; ಎನ್ಪು (ಎನ್ಬು) ಇೞೈಕ್ಕುಮ್–ಮೂಳೆಯನ್ನು ಮುರಿಯುವಂತಹ (ನಿನ್ನ

ರೂಪ ಶೋಭಾದಿಗಳಿಂದ ನನ್ನ ಮೂಳೆಯನ್ನು ಛೇದಿಸುವಂತಹ), ಇಳಮ್ ಕಿಳಿಯೇ—ಎಳೇ ಗಿಣಿಯೇ, ಯಾಂವಳರ್ತ್ತನೀ ಅಲ್ಲೈಯೇ—ನಾನು ಬೆಳೆಸಿದ ನೀನಲ್ಲವೇ.

( ಸ—ಗಾ—ರ ॥ )—

**ಮತ್ಸಂವರ್ಧಿತ ! ಹೇ ಶುಕ ! ತ್ವಮಧುನಾ ಶ್ರೀಕಾನ್ತಮೇವಂ ವದ,**
**ಕ್ಲೇಶೋ ಮೇಽಸ್ತಿ ಹಿ ದುಸ್ಸಹೋಽಯಮಧುನಾ ಶೀತಾನಿಲಾಘಾತತಃ ।**
**ಆಗಾಂಸ್ಯೇವ ಮಮ ಸ್ಮರೇತ್ಕಿಮು ಹರಿಃ ? ಕಾರುಣ್ಯಸಿನ್ಧುರ್ನ ಕಿಂ ?**
**ಕಿಂ ತಾದೃಙ್ಮಮ ವರ್ಧತೇಽದ್ಯ ದುರಿತಂ? ಪಾತ್ರಂ ದಯಾಯಾ ನ ಕಿಮ್? ॥**

ತಾ॥ ನಾನು ಬೆಳೆಸಿದ ಎಳೇಗಿಣಿಯೇ ! ಅತಿಶೀತಲವಾದ ಗಾಳಿಯು ವಿರಹ ಸನ್ತಪ್ತೆಯಾದ ನನ್ನನ್ನು ಹೀಗೆ ಪೀಡಿಸುತ್ತಿದ್ದಾಗ್ಯೂ ನನ್ನ ಅಪರಾಧವನ್ನೇ ನೆನೆಸಿ ನನ್ನಲ್ಲಿ ಕೃಪೆಮಾಡದೆ ಇರುವ ಶ್ರಿಯಃಪತಿಯಾದ ಭಗವನ್ತನನ್ನು ನೋಡಿ—"ನಿಮ್ಮ ಕೃಪಾಗುಣವು ಇವಳ ವಿಷಯದಲ್ಲಿ ಮಾತ್ರ ಅಂಕುರಿಸದೆ ಇರುವಂತೆ, ಇವಳು ಏನು ಅಪರಾಧವಂ ಮಾಡಿದಳು ? "—ಎಂಬೀ ಒಂದುಮಾತನ್ನು ಹೇಳು.

(೮) ನೀಯಲ್ಲೈಯೇ ಶಿಱುಪೂವಾಯ್, ನೆಡುಮಾಲಾರ್ಕ್ಕೆನ್
ತೂದಾಯ್,
ನೋಯೆನದು ನುವಲೆನ್ನ ನುವಲಾದೇ ಯಿರುನ್ದೊೞಿನ್ದಾಯ್,
ಶಾಯಲೊಡು ಮಣಿಮಾಮೈ ತಳರ್ನ್ದೇನ್ ನಾನ್,
ಇನಿಯುನದು,
ವಾಯಲಕಿಲಿನ್ನಡಿಶಿಲ್ ವೈಪ್ಪಾರೈ ನಾಡಾಯೇ.

ಪ್ರ॥ ಶಿಱುಪೂವಾಯ್—ಚಿಕ್ಕ ಪೂವೈಪಕ್ಷಿಯೇ, ನೆಡುಮಾಲಾರ್ಕ್ಕು—(ಆಶ್ರಿತ ವಿಷಯದಲ್ಲಿ) ಅತ್ಯನ್ತ ವಾತ್ಸಲ್ಯವುಳ್ಳ ಸ್ವಾಮಿಗೆ, ಎನ್ ತೂದಾಯ್—ನನ್ನ ದೂತಿಯಾಗಿ ಹೋಗಿ, ಎನದು—ನನ್ನ, ನೋಯ್—ವಿರಹವ್ಯಾಧಿಯನ್ನು, ನುವಲೆನ್ನ—ಹೇಳೆಂದರೆ, ನುವಲಾದೇ—ಹೇಳದೇ, ಇರುನ್ದೊೞಿನ್ದಾಯ್ ನೀಯಲ್ಲೈಯೇ—(ಗರ್ವದಿಂದ) ನೀನು ಇದ್ದುಬಿಟ್ಟೆಯಲ್ಲವೇ; ನಾನ್—ನಾನು, ಶಾಯಲೊಡು—ಕಾಂತಿಯೊಡನೆ ಕೂಡಿದ, ಮಣಿ—ಸುಂದರವಾದ, ಮಾಮೈ—(ಶರೀರದ) ವರ್ಣವನ್ನು, ತಳರ್ನ್ದೇನ್—ಕಳೆದುಕೊಂಡೆನು; ಇನಿ—ಹೀಗಾದಮೇಲೆ, ಉನದು—ನಿನ್ನ, ವಾಯಲಕಿಲ್—ಕೊಕ್ಕಿನೊಳಗೆ (ಹೋಗುವಂತೆ), ಇನ್—ಮಧುರವಾದ, ಅಡಿಶಿಲ್—ಅನ್ನವನ್ನು, ವೈಪ್ಪಾರೈ—ಇಡುವವರನ್ನು, ನಾಡಾಯ್—ಹುಡುಕಿಕೋ.

( ಸ–ಗಾ–ರ || )—

**ದೂತೀಭೂಯ ಮಮ ತ್ವಮದ್ಯ ಪತಗೆ ! ಪ್ರಾಪ್ತೋ ನ ತಂ ಮೂಢಧೀ-**
**ರ್ವಿಷ್ಣುಂ ಮೇ ಪ್ರಭುಮಿಂದಿರೇಶಮನಘಂ ನಾವೇದಯೋ ಮೇ ದಶಾಮ್ ।**
**ಅತ್ಯನ್ತಾರ್ತಿಶರೀರಿಮಾಮಾಂ ಕಿಲ ! ತತೋ ವರ್ಣೋಽದ್ಯ ದೇಹೇ ಮಮ**
**ಕ್ಷೀಣೋಽಸ್ತ್ಯಸ್ಮಿನ್ಮುಕಾಲ ಏವ ಮಿತರಾಂಸ್ತ್ವಂ ಪೋಷಕಾನ್ ಮಾರ್ಗಯ॥**

ತಾ|| ಎಲ್ಲೈ ಚಿಕ್ಕ ಪ್ರೀತ್ಯೆ ಪಕ್ಷಿಯೇ ! ಆಶ್ರಿತ ವಿಷಯದಲ್ಲಿ ಅತ್ಯನ್ತ ವಾತ್ಸಲ್ಯವುಳ್ಳ ಭಗವನ್ತನಿಗೆ ನನ್ನ ದೂತಿಯಾಗಿ ಹೋಗಿ ನನ್ನ ಈ ವಿರಹಸನ್ತಾಪವನ್ನು ತಿಳಿಯಪಡಿಸೆಂದು ನಾನು ಹೇಳಿದಾಗ್ಯೂ ನೀನು ಹೋಗದೆ ಗರ್ವದಿಂದ ಸುಮ್ಮನೆ ಇದ್ದುಬಿಟ್ಟೆಯಲ್ಲವೇ ! ಈಗ ನನಗೆ ಶರೀರದಲ್ಲಿ ಕೃಶತ್ವವುಂಟಾಗಿ ವರ್ಣಕಾಂತಿಯೆಲ್ಲವೂ ಹೋಗಿ ಇರುವುದರಿಂದ ನನಗೆ ಚರಮದಶೆಯು ಸಮೀಪಿಸಿದೆ; ಇನ್ನು ಮೇಲೆ ನಿನ್ನ ಕೊಕ್ಕಿನೊಳಗೆ ಮಧುರವಾದ ಅನ್ನವನ್ನು ಇಡುವವರು ಯಾರನ್ನಾದರೂ ನೀನೇ ಹುಡುಕಿಕೊಳ್ಳಬೇಕು.

(೯) ನಾಡಾದ ಮಲರ್ನಾಡಿ ನಾಳ್ತೋಱುಮ್ ನಾರಣನ್ ತನ್,
ವಾಡಾದ ಮಲರಡಿಕ್ಕೀೞ್ ವೈಕ್ಕವೇ ವಕುಕ್ಕಿನ್ಱು.
ವೀಡಾಡಿ ವೀಱ್ಱಿರುತ್ತಲ್ ವಿನೈಯಱ್ಱದೆನ್ಶೆಯ್ವದೋ,
ಊಡಾಡು ಪನಿವಾಡಾ ಯುರೈತ್ತೀರಾಯೆನದುಡಲೇ.

ಪ್ರ|| ಊಡು–(ಅವರಿಗೂ ನನಗೂ) ಮಧ್ಯೆ, ಆಡು–ಆಡಿ ಸಂಚರಿಸುತ್ತಿರುವ, ಪನಿವಾಡಾಯ್–ಶೀತಲವಾದ ವಾಯುವೇ, ನಾಡಾದ–ದುರ್ಲಭವಾದ, ಮಲರ್–ಪುಷ್ಪಗಳನ್ನು, ನಾಡಿ–ಹುಡುಕಿ, ನಾಳ್ತೋಱುಮ್–ಪ್ರತಿದಿನವೂ, ನಾರಣನ್ ತನ್–ಶ್ರೀಮನ್ನಾರಾಯಣನ, ವಾಡಾದಮಲರ್–ಭೋಗ್ಯವಾದ ಕಮಲದಂತಿರುವ, ಅಡಿಕ್ಕೀೞ್–ಪಾದಾರವಿಂದಗಳಲ್ಲಿ, ವೈಕ್ಕವೇ–ಸಮರ್ಪಿಸುವುದಕ್ಕಾಗಿ, ವಕುಕ್ಕಿನ್ಱು–(ಇಂದ್ರಿಯಗಳನ್ನು) ಕೊಟ್ಟಿರಲು, ವೀಡು–ವಿಶ್ಲೇಷದಲ್ಲಿ, ಆಡಿ–ಇದ್ದುಕೊಂಡು, ವೀಱ್ಱಿರುತ್ತಲ್–ಏಕಾಕಿಯಾಗಿರೋಣವೆಂಬ, ವಿನೈಯಱ್ಱದು–ಭಾಗ್ಯಹೀನತ್ವವು, ಎನ್ ಶೆಯ್ವದೋ – ಯಾವ ಪ್ರಯೋಜನವನ್ನುಂಟುಮಾಡುವುದೋ (ಎಂದು), ಉರೈತ್ತು–(ಆ ಸ್ವಾಮಿಗೆ) ಹೇಳಿ (ಅನುಕೂಲವಾದ ಉತ್ತರವನ್ನು ನೀನು ನನಗೆ ತರದೆಹೋದರೆ), ಎನದುಉಡಲ್–ನನ್ನ ಶರೀರವನ್ನು, ಈರಾಯ್–ಶೀಳಿಬಿಡು.

( ಸ–ಗಾ–ರ ॥ )—

**ಮಧ್ಯೇ ಸಂಚರಸಿ ತ್ವಮದ್ಯ ಸಹಸಾ ಗತ್ವಾಽದ್ಯ ಭೋ ಮಾರುತ !**
**ಶ್ರೀಶಂ ತಂ ವದ ಕಿಂಚಿದೇವ ವಚನಂ ನಾರಾಯಣಂ ಮೇ ಪ್ರಭುಮ್ ।**
**ತತ್ಪಾದಾಬ್ಜಯುಗೇ ಪ್ರಸೂನರಚನೇ ಭಾಗ್ಯಂ ನ ಮೇ ಪಾಪ್ಮತೋ !**
**ವಿಶ್ಲೇಷೇಽತ್ರ ವಿಷಣ್ಣತಾಽಸ್ತಿ ಹಿ ತತಸ್ತ್ವಂ ಮೇ ವಪುರ್ನಾಶಯ ॥**

ತಾ॥ ಆ ಭಗವನ್ತನಿಗೂ ನನಗೂ ಮಧ್ಯೆ ಸಂಚರಿಸುತ್ತಿರುವ ಶೀತಲವಾದ ವಾಯುವೇ ! ಅವನು ನನಗೆ ಈ ಕರಣಗಳನ್ನು ಸದ್ವಿನಿಯೋಗಕ್ಕಾಗಿ ಕೊಟ್ಟಿರುವಲ್ಲಿ ಆ ಶ್ರೀಮನ್ನಾರಾಯಣನ ಪಾದಾರವಿಂದಗಳಲ್ಲಿ ಶ್ಲಾಘ್ಯವಾದ ಪುಷ್ಪಗಳನ್ನು ನಿತ್ಯವೂ ಸಮರ್ಪಿಸೋಣವೆಂಬ ಭಾಗ್ಯವು ನನಗೆ ಇಲ್ಲದೆ ಇರುವಂತೆ ಹೀಗೆ ವಿಶ್ಲೇಷದಶೆಯನ್ನು ಅನುಭವಿಸುತ್ತಿರುವ ನನ್ನ ಪಾಪವು ಹ್ಯಾಗೆ ಪರಿಣಮಿಸುವುದೋ— ಎಂದು ಆ ಸ್ವಾಮಿಗೆ ಹೇಳಿ ಅನುಕೂಲವಾದ ಪ್ರತ್ಯುತ್ತರವನ್ನು ನೀನು ತರದೇ ಹೋಗುವಪಕ್ಷದಲ್ಲಿ ನನ್ನ ಈ ಶರೀರವನ್ನು ಈಗಲೇ ಶೀಳಬಿಡು.

(೧೦) ಉಡಲಾೞಿ ಪ್ಪಿಱಪ್ಪು ವೀಡುಯಿರ್ ಮುದಲಾಯ್ ಮುಱ್ಱು
ಮಾನಾಯ್

ಕಡಲಾೞಿ ನೀರ್ ತೋಱ್ಱಿ ಯದನುಳ್ಳೇ ಕಣ್ವಳರುಮ್,
ಅಡಲಾೞಿ ಯಮ್ಮಾನೈ ಕ್ಕಣ್ಡಕ್ಕಾಲ್ ಇದು ಶೊಲ್ಲಿ,
ವಿಡಲಾೞಿ ಮಡನೆಞ್ಜೇ ವಿನೈಯೋಮೊನ್ಱಾಮಳವೇ.

ಪ್ರ ॥ ಆೞಿ – ಅಗಾಧವಾದ, ಮಡನೆಞ್ಜೇ – ನನಗೆ ವಶ್ಯವಾದ ಮನಸ್ಸೇ ಉಡಲ್–ಶರೀರದಲ್ಲಿ, ಆೞಿ – ಚಕ್ರಾಕಾರವಾದ, ಪಿಱಪ್ಪು – ಜನ್ಮವೂ, ವೀಡು – ಮೋಕ್ಷವೂ, ಉಯಿರ್ – (ಇವುಗಳನ್ನು ಅನುಭವಿಸುವ) ಜೀವಾತ್ಮನೂ, ಮುದಲಾಯ್–ಮೊದಲಾದುವುಗಳಿಗೆಲ್ಲಾ ನಿರ್ವಾಹಕನಾಗಿ, ಮುಱ್ಱುಮಾನಾಯ್ – ಸಕಲ ವಸ್ತುಗಳೂ ಆಗಿ, ಆೞಿನೀರ್–ಅಗಾಧವಾದ ಜಲದಲ್ಲಿ, ಕಡಲ್–ಕ್ಷೀರಸಮುದ್ರದಲ್ಲಿ, ತೋಱ್ಱಿ–ಪ್ರಕಾಶಿಸಿ, ಅದನುಳ್ಳೇ–ಅದರೊಳು, ಕಣ್ವಳರುಮ್–ಶಯನಿಸಿಕೊಂಡಿರುವ, ಅಡಲ್–ವಿರೋಧಿಧ್ವಂಸಕರವಾದ, ಆೞಿ-ಚಕ್ರವನ್ನು ಧರಿಸಿರುವ, ಅಮ್ಮಾನೈ–ಸ್ವಾಮಿಯನ್ನು, ಕಂಡಕ್ಕಾಲ್–ಕಂಡಾಗ, ಇದು–ಈ ನನ್ನ ದಶೆಯನ್ನು, ಶೊಲ್ಲಿ–ಅವನಿಗೆ ಹೇಳಿ, ವಿನೈಯೋಮ್–ಪಾಪಿನಿಯಾದ ನಾನು, ಒನ್ಱು ಆಮ್ ಅಳವು-ಅವನೊಡನೆ ಒಂದಾಗಿ ಸೇರುವವರಿಗೂ, ವಿಡಲ್–ಬಿಡದೆ ನನ್ನನ್ನು ಧರಿಸಿಕೊಂಡಿರು.

( ಸ-ಗಾ-ರ ॥ )—

**ಭೋಃ ! ಭೋಃ ! ಮಾನಸ ! ಮೇ ಗಭೀರ ! ಬಹುಧಾ ಸಂಸಾರಚಕ್ರಸ್ಯ ಮೈ**
**ಮೋಕ್ಷಸ್ಯಾತ್ಮಗಣಸ್ಯ ಭೋಗ್ಯಕರಣಾವಳ್ಯಾಶ್ಚ ನಿರ್ವಾಹಕಮ್।**
**ತಂ ಕ್ಷೀರಾರ್ಣವಶಾಯಿನಂ ಯದಿ ಹರಿಂ ಪಶ್ಯೇಸ್ಸ್ವಯಂ ಚಕ್ರಿಣಂ**
**ತ್ವಂ ಬ್ರೂಹ್ಯದ್ಯ ದಶಾಂ ಮಮ ಪ್ರಿಯಾಸಮಾಗತ್ಯೈಚ! ಮಾಂ ಮಾತ್ಯಜ॥**

ತಾ॥ ಎಲೈ ನನ್ನ ಅಗಾಧವಾದ ಮನಸ್ಸೇ! ಜನ್ಮಮೋಕ್ಷಗಳೂ ಇವುಗಳನ್ನನುಭವಿಸುವ ಆತ್ಮವರ್ಗಗಳೂ ಮತ್ತು ಭೋಗ್ಯಭೋಗೋಪಕರಣಗಳೂ ಇವುಗಳಿಗೆಲ್ಲಾ ತಾನೇ ನಿರ್ವಾಹಕನಾಗಿ ಕ್ಷೀರಾರ್ಣವಶಾಯಿಯಾಗಿ ಚಕ್ರಪಾಣಿಯಾಗಿರುವ ನಮ್ಮ ಸ್ವಾಮಿಯನ್ನು ಕಂಡಾಗ ಈ ನನ್ನ ದುರ್ದಶೆಯನ್ನು ನೀನು ತಿಳಿಸಿ ನನಗೆ ಅವನೊಡನೆ ಸಂಗಮವುಂಟಾಗುವವರೆಗೂ ನೀನು ನನ್ನನ್ನು ಬಿಡದೆ ಧರಿಸಿಕೊಂಡಿರು.

(೧೧) ಅಳವಿಯನ್ತ ಏೞುಲಕತ್ತವರ್ ಪೆರುಮಾನ್ ಕಣ್ಣನೈ,
ವಳವಯಲ್‌ಶೂೞ್ ವಣ್ಕುರುಕೂರ್‌ಚ್ಚಡಕೋಪನ್
ವಾಯನ್ದುರೈತ್ತ,
ಅಳವಿಯನ್ತ ವನ್ದಾದಿ ಯಾಯಿರತ್ತುಳಿಪ್ಪತ್ತಿನ್,
ವಳವುರೈಯಾಲ್ ಪೆಱಲಾಕುಮ್ ವಾನೋಙ್ಗು ಪೆರುವಳಮೇ.

ಪ್ರ॥ ಅಳವು-ಎಲ್ಲೆಯನ್ನು, ಇಯನ್ತ-ಮೀರಿದ, ಏೞು ಉಲಕತ್ತವರ್-ಸಪ್ತಲೋಕಗಳೊಳಗಿರುವ ಚೇತನರಿಗೂ, ಪೆರುಮಾನ್ – ಸ್ವಾಮಿಯಾದ, ಕಣ್ಣನೈ-(ಆಶ್ರಿತಸುಲಭನಾದ) ಕೃಷ್ಣನನ್ನು, ವಳ-ಸಮೃದ್ಧವಾದ, ವಯಲ್ –(ಸಸ್ಯವುಳ್ಳ) ಕ್ಷೇತ್ರಗಳಿಂದ, ಶೂೞ್-ಪರಿವೃತವಾದ, ವಣ್-ರಮ್ಯವಾದ, ಕುರುಕೂರ್–ಕುರುಕಾಪುರಿಗೆ ನಿರ್ವಾಹಕರಾದ, ಶಡಕೋಪನ್–ನಮ್ಮಾೞ್ವಾರ್, ವಾಯ್‌ನ್ದು–(ಜ್ಞಾನಭಕ್ತಿಗಳಿಂದ) ಆಶ್ರಯಿಸಿ, ಉರೈತ್ತ–(ಹೇಳಿರುವ) ರಚಿಸಿರುವ, ಅಳವು ಇಯನ್ತ–ಶಬ್ದಾರ್ಥಾಲಂಕಾರಾದಿ ಸಾಂಗತ್ಯವುಳ್ಳ, ಅನ್ದಾದಿ–ಅನ್ತಾದಿ ರೂಪವಾದ, ಆಯಿರತ್ತುಳ್–ಸಹಸ್ರಪದ್ಯಾವಳಿಯಲ್ಲಿ, ಇಪ್ಪತ್ತಿನ್–ಈ ದಶಕದ, ವಳಮ್–ಭೋಗ್ಯವಾದ ಉರೈಯಾಲ್–ಸೂಕ್ತಿಮಾತ್ರದಿಂದಲೇ, ವಾನ್–ಪರಮಪದದಲ್ಲಿ, ಓಙ್ಗು–ಉತ್ತುಂಗವಾದ (ಅತ್ಯುತ್ತಮವಾದ), ಪೆರುವಳಮ್–ಕೈಂಕರ್ಯರೂಪ ಮಹಾಸಾಮ್ರಾಜ್ಯವನ್ನು, ಪೆರಲಾಕುಮ್–ಹೊಂದಲಾಗುವುದು (ಹೊಂದಬಹುದು).

( ಸ-ಗಾ-ರ ॥ )—

ಉತ್ತುಂಗಾಮಿತ ಸಪ್ತಲೋಕಶರಣೇ ನಾರ್ಥಂ ಚ ಕೃಷ್ಣಂ ಹರಿಂ
ದಿವ್ಯಜ್ಞಾನಬಲಾದ್ಭಜನ್ ಹಿ ಕುರುಕಾಪುರ್ಯಾಶ್ಶಠಾರಿಃ ಪ್ರಭುಃ ।
ಸಾಹಸ್ರಂ ವ್ಯತನೋಚ್ಚ ವೃತ್ತರಚನೈರನ್ತಾದಿಪದ್ಯಾವಳೀಂ
ತತ್ರೇದಂ ದಶಕಂ ತು ಭಕ್ತಪಠಿತಂ ದಿವ್ಯಂ ಪದಂ ಪ್ರಾಪಯೇತ್ ॥

ತಾ॥ ಸಪ್ತಲೋಕಗಳಿಗೂ ನಿರ್ವಾಹಕನಾದ ಸ್ವಾಮಿಯಾದ ಶ್ರೀಕೃಷ್ಣನನ್ನು ಜ್ಞಾನಭಕ್ತಿಗಳಿಂದ ಆಶ್ರಯಿಸಿ ಸಂಕೀರ್ತನವಮಾಡಿರುವ ಶ್ರೀ ಕುರುಕಾಪುರಿಯ ಶಠಾರಿಮುನಿವರ್ಯರಿಂದ ವಿರಚಿತವಾದ ಅನ್ತಾದಿರೂಪವಾದ ಸಹಸ್ರಗಾಥಾತ್ಮಕ ಪ್ರಬನ್ಧದೊಳ್ "ದಿವ್ಯತಮವಾದ ಈ ದಶಕವು ಪಠನಮಾತ್ರದಿಂದಲೇ ಪರಮಪದದಲ್ಲಿ ಉತ್ತಮವಾದ ಕೈಂಕರ್ಯಸಾಮ್ರಾಜ್ಯವನ್ನು ಉಂಟುಮಾಡುವುದು.

---

( ದ್ರು-ಉ-ಸಂ. )—

ತತ್ಕಾಂಕ್ಷಿತಾನಧಿಗಮೇನ ಮುನಿರ್ವಿಷಣ್ಣಃ
ಪ್ರಾಪ್ತೋ ದಶಾಂ ಚ ಹರಿಭುಕ್ತವಿಯುಕ್ತನಾರ್ಯಾಃ ।
ಸರ್ವಾಪರಾಧಸಹತಾಮನವಬೋಧ್ಯ ದೂತ್ಯೈ-
ಶ್ಶೌರೇಸ್ಸ್ವದೋಷಪರತಾಮಲುನಾಚ್ಚತುರ್ಥೇ ॥

( ದ್ರು-ಉ-ತಾ-ರ )—

ತ್ರಾಣೇ ಬದ್ಧಧ್ವಜತ್ವಾಚ್ಛುಭನಯನತಯಾ ಸ್ವಾರ್ಥಲಾಭೇಽರ್ಥಿಭಾವಾ-
ತ್ತಿಮ್ಯನ್ತ್ಯೋಘಸ್ವಭಾವಾ ಜ್ಜಗದುಪಜನನಸ್ಥಾಪನಾತಿಪ್ರಿಯತ್ವಾತ್ ।
ಕಾರುಣ್ಯಾಪ್ತತ್ವಯೋಗಾ ದನುಗತಮಹಿಷೀಸನ್ನಿಧೇಸ್ಸಂಗದೈರ್ಘ್ಯಾ-
ನ್ನಾನಾಬನ್ಧೈಸ್ಸುರಕ್ಷಾವಹಿತತಮತಯಾ ಕ್ಷಾಮ್ಯತೀತ್ಯಾಹ ಕೃಷ್ಣಮ್ ॥
ಸಧ್ರೀಭವ್ಯಾನ್ ಸುವಾಚಸ್ಸುಚರಿತಸುಭಗಾನ್ ಕೃಷ್ಣಸಾರೂಪ್ಯಸೌಮ್ಯಾನ್
ಸ್ವಾಹಾರೋದಾರಶೀಲಾಂ ಸ್ತನುಧೃತಭಗವಲ್ಲಕ್ಷ್ಮಣೋ ಬಾಲ್ಯಗುಪ್ತಾನ್ ।
ಭ್ರಾತೃಸ್ವಚ್ಛನ್ದವೃತ್ತೀನಭಿಗತ ಶಿಶಿರಾನನ್ತರಜ್ಞೋಕ್ತಿ ಯೋಗ್ಯಾ-
ನಾಚಾರ್ಯಾನ್ ಕೃಷ್ಣಲಬ್ಧ್ಯೈ ಶರಣಮನ್ವೃಣುತ ಪ್ರೇಯಸೀದೂತನೀತ್ಯಾ ॥

### (ಈ ಚತುರ್ಥದಶಕದ ಸಾರಾಂಶ)

ಈ ದಶಕದಲ್ಲಿ ಶ್ರೀ ಶಠಾರಿಮುನಿವರ್‍ಯರು ತಾವು ನಾಯಿಕಾರೂಪವನ್ನು ಧರಿಸಿ ತಮ್ಮ ವಿರಹಸನ್ತಾಪವನ್ನು ಭಗವನ್ತನಿಗೆ ಪಕ್ಷಿಗಳ ಮೂಲಕ ತಿಳಿಯಪಡಿಸಿ ಅವನ ಕ್ಷಮೆಯನ್ನೂ ಅಂಗೀಕಾರವನ್ನೂ ಪ್ರಾರ್ಥಿಸಿ ಇರುತ್ತಾರೆ.

---

## ಶ್ರೀಃ

# ಪ್ರಥಮಶತಕದಲ್ಲಿ—ಪಂಚಮದಶಕ.

### (ವಳವೇೞುಲಕಿನ್-)

(ಈಶ್ವರನು ತನ್ನ ಸೌಶೀಲ್ಯದಿಂದ ಶಠಾರಿಯ ವಿಶ್ಲೇಷವನ್ನು ಸಹಿಸಲಾರದೆ ತನ್ನ ಸಾನ್ನಿಧ್ಯವನ್ನು ಅನುಗ್ರಹಿಸಿದುದಾಗಿ ಇಲ್ಲಿ ಹೇಳಲ್ಪಡುತ್ತದೆ.)

---

(೧) ವಳವೇೞುಲಕಿನ್ ಮುದಲಾಯ ವಾನೋರಿಱೈಯೈ,
ಯರುವಿನೈಯೇನ್,
ಕಳವೇೞ್ ವೆಣ್ಣೆಯ್ ತೊಡುವುಣ್ಡ ಕಳ್ವಾ ವೆನ್ಬನ್
ಪಿನ್ನೈಯುಮ್,
ತಳವೇೞ್ಮುಱುವಲ್ ಪಿನ್ನೈಕ್ಕಾಯ್ ವಲ್ಲಾನಾಯರ್
ತಲೈವನಾಯ್,
ಇಳವೇಱೇೞುನ್ತೞುವಿಯ ವೆನ್ದಾಯೆನ್ಬನ್ ನಿನ್ನೈನ್ದುನ್ನೈನ್ದೇ.

ಪ್ರ|| ವಳಮ್—ಶ್ಲಾಘ್ಯವಾದ, ಏೞುಲಗಿನ್ – ಸಪ್ತಲೋಕಗಳಿಗೂ, ಮುದಲಾಯ—ಕಾರಣಭೂತನಾದ, ವಾನೋರ್ – ನಿತ್ಯಸೂರಿಗಳಿಗೆ, ಇಱೈಯೈ—ಸ್ವಾಮಿಯಾದ ಭಗವನ್ತನನ್ನು, ಅರುವಿನೈಯೇನ್—ಅತ್ಯನ್ತಪಾಪಿಯಾದ ನಾನು, ನಿನ್ನೈನ್ದು—ಮನಸ್ಸಿನಿಂದ ಭಾವಿಸಿ, ನೈನ್ದು – ಶರೀರಶೈಥಿಲ್ಯವನ್ನು ಹೊಂದಿ, ಕಳವು ಏೞ—ಚೌರ್ಯವು ಮೇಲಕ್ಕೆ ಪ್ರಕಾಶಿಸುವಂತೆ, ವೆಣ್ಣೆಯ್—ಬೆಣ್ಣೆಯನ್ನು, ತೊಡುವುಣ್ಡ—ಮರಸಿಕ್ಕೊಂಡು ಭಕ್ಷಿಸಿದ, ಕಳ್ವಾ—ವಂಚಕನೇ! ಎನ್ಬನ್—ಎಂದು ಕರೆಯುವೆನು; ಪಿನ್ನೈಯುಮ್—ಅದೂಅಲ್ಲದೆ, ತಳವು—ಮೊಲ್ಲೆಮೊಗ್ಗಿನಂತೆ, ಏೞ—ಪ್ರಕಾಶಿಸುವ,

ಮುಱುವಲ್ – (ದಂತಪಙ್ಕ್ತಿಗಳಿಂದ) ಮಂದಹಾಸವನ್ನು ತೋರಿಸುತ್ತಿರುವ, ಪಿನ್ನೈಕ್ಕು–ನಪ್ಪಿನ್ನೈ ಎಂಬ ನೀಳಾದೇವಿಗೆ, ಆಯ್–ಭವ್ಯನಾಗಿ, ವಲ್–ಪ್ರಬಲರಾದ, ಆನಾಯರ್–ಗೋಪರಿಗೆ, ತಲೈವನಾಯ್–ಶ್ರೇಷ್ಠನಾಗಿ, (ನಿಂತು), ಇಳಮ್–ಯೌವನದಿಂದ ಮದಿಸಿರುವ, ಏೞು ಏಱುಮ್–ಏಳು ವೃಷಭಗಳನ್ನೂ, ತೞುವಿಯ–ಮರ್ದನಮಾಡಿದ, ಎನ್ನಾಯ್–ನನ್ನ ಸ್ವಾಮಿಯೇ!, ಎನ್ಱು–ಎಂದು ಕರೆಯುವೆನು.

( ಸ–ಗಾ–ರ ॥ )—

**ಮೂಲಂ ಸಪ್ತಜಗತ್ತತೇಶ್ಚ ಮನಸಾ ಸೂರೀನ್ದ್ರನಾಥಂ ಸ್ಮರನ್**
**ದೇಹೇಽಹಂ ಶಿಥಿಲೇಂದ್ರಿಯಶ್ಚ ವಚಸಾ ಪಾಪೀ ವದಾಮ್ಯೇವ ಹಿ।**
**ಧೂರ್ತ ತ್ವಂ ನವನೀತಚೋರ ಇತಿ ಚ ಸ್ಮೇರಾನನಾಂ ತಾಂ ಪ್ರಿಯಾಂ**
**ನೀಳಾಂ ಪ್ರಾಪ್ತುಮಹೋ! ವೃಷಾನಪಿ ವಿಭೋ! ಸಪ್ತಾವಧೀಶ್ಚೇತ್ಯಪಿ॥**

ತಾ॥ (ನಿತ್ಯಸೂರೀನ್ದ್ರನಾದ ಭಗವನ್ತನನ್ನು ಮನೋವಾಕ್ಕಾಯಗಳಿಂದ ನಾನು ದೂಷಿಸಿದೆನೆಂದು ಇಲ್ಲಿ ಹೇಳುತ್ತಾರೆ) ಸಪ್ತಲೋಕಗಳಿಗೂ ಕಾರಣಭೂತನಾದ ನಿತ್ಯಸೂರೀಶ್ವರನನ್ನು ಅತ್ಯನ್ತ ಪಾಪಿಯಾದ ನಾನು ಮನಸ್ಸಿನಿಂದ ಧ್ಯಾನಮಾಡಿ ಶರೀರದಲ್ಲಿ ಶೈಥಿಲ್ಯವನ್ನು ಪಡೆದು ವಾಕ್ಕಿನಿಂದ ಈ ಪ್ರಕಾರ ದೂಷಿಸುವೆನು. “ನಿನ್ನ ಚೌರ್ಯವು ಪ್ರಕಾಶಿಸುವಂತೆ ಮರಸಿಕೊಂಡು ಬೆಣ್ಣೆಯನ್ನು ಭಕ್ಷಿಸಿದ ವಂಚಕನೇ! ಮತ್ತು ಪ್ರಕಾಶವಾದ ಮಂದಹಾಸವುಳ್ಳ (ನಪ್ಪಿನ್ನೈ ಎಂಬ) ನೀಳಾದೇವಿಯನ್ನು ಹೊಂದುವುದಕ್ಕೋಸ್ಕರ ಗೋಪಕುಲ ಶ್ರೇಷ್ಠನಾಗಿ ನಿಂತು ಯೌವನದಿಂದ ಮದಿಸಿ ಇದ್ದ ಸಪ್ತ ವೃಷಭಗಳನ್ನೂ ಮರ್ದನಮಾಡಿದ ನನ್ನ ಸ್ವಾಮಿಯೇ”!—ಎಂದೂ ಕರೆಯುವೆನು.

(೨) ನಿನ್ಱನ್ಱು ನಿನ್ಱುಳ್‌ಕರ್ನ್ಱುರುಕಿ ಯಿಮೈಯೋರ್
ಪಲರುಮ್ ಮುನಿವರುಮ್,
ಪುನ್ಱನ್ಱುಕಣ್ಣೀ ನೀರ್ ಶಾನ್ಱುಮ್ ಪುಕೈಯೋಡೇನ್ಱು
ವಣಙ್ಗಿನಾಲ್,
ನಿನ್ಱನ್ಱುವೆಲ್ಲಾ ಪ್ಪೊರುಳ್‌ಕಳುಕ್ಕುಮ್ ವಿತ್ತಾಯ್
ಮುದಲಿಲ್‌ಶಿದೈಯಾವೇ,
ಮನತ್ತಾಯ್‌ಞಾನತ್ತುನ್ ಪೆರುಮೈ ಮಾಶೂಣಾದೋ
ಮಾಯೋನೇ.

ಪ್ರ|| ಇಮ್ಮೈಯೋರ್–ಅನಿಮಿಷರಾದ ಬ್ರಹ್ಮಾದಿದೇವತೆಗಳೂ, ಮುನಿವರುಮ್–ಮನನಶೀಲರಾದ ಸನಕಾದಿ ಮಹರ್ಷಿಗಳೂ ಆದ, ಪಲರುಮ್–ಅಸಂಖ್ಯಾತ ಜೀವವರ್ಗಗಳೂ, ನಿನ್ನೈನ್ದು–ನಿನ್ನ ಗುಣಗಳನ್ನು ಮನಸ್ಸಿನಲ್ಲಿ ಅನುಸನ್ಧಾನಮಾಡಿ, ನೈನ್ದು–(ಅದರಿಂದ) ಶರೀರದಲ್ಲಿ ಶೈಥಿಲ್ಯವಂ ಪಡೆದು, ಉಳ್ಕರೈನ್ದು–ಮನಸ್ಸು ಕರಗಿ, ಉರುಕಿ–ಪ್ರವಹಿಸಿ, ಪುನೈನ್ದ–ಪ್ರೇಮದಿಂದ ರಚಿಸಲ್ಪಟ್ಟ, ಕಣ್ಣಿ–ಪುಷ್ಪ ಮಾಲೆಯನ್ನೂ, ನೀರ್–ಅರ್ಘ್ಯಪಾದ್ಯಾದಿ ತೀರ್ಥವನ್ನೂ, ಶಾನ್ದಮ್–ಚಂದನ ವನ್ನೂ, ಪುಕೈಯೋಡು–ಧೂಪದೊಡನೆ, ಏನ್ದಿ–ಕೈಯಲ್ಲಿ ತೆಗೆದುಕೊಂಡು, ವಣಙ್ಗಿ ನಾಲ್–ನಮಸ್ಕಾರಮಾಡಿದರೆ, ಮಾಯೋನೇ–ಆಶ್ಚರ್ಯಗುಣಚೇಷ್ಟಿತನೇ, ನಿನೈನ್ದ–ಸೃಷ್ಟಿಕಾಲದಲ್ಲಿ ದಯೆಯಿಂದ ಸ್ಮರಿಸಲ್ಪಟ್ಟ, ಎಲ್ಲಾಪ್ಪೊರುಳ್ಕಳುಕ್ಕುಮ್–ಸಮಸ್ತ ಪದಾರ್ಥಗಳಿಗೂ, ವಿತ್ತಾಯ್–ಮೂಲಕಾರಣ (ಬೀಜ) ವಾಗಿ, ಮುದಲಿಲ್ ಶಿದೈಯಾಮೇ–ಸ್ವರೂಪವಿಕಾರವು ಉಂಟಾಗದಂತೆ, ಮನನ್–ಮನಸ್ಸಿನಿಂದ, ಶೆಯ್–ಮಾಡಲ್ಪಟ್ಟ, ಞಾನತ್ತು–ಸಂಕಲ್ಪರೂಪವಾದ ಜ್ಞಾನವುಳ್ಳ, ಉನ–ನಿನ್ನ, ಪೆರುಮೈ–ಮಹಿಮೆಯು, ಮಾಶು ಊಣಾದೋ–ಮಾಲಿನ್ಯವನ್ನು ಹೊಂದುವುದಿಲ್ಲವೋ ?

( ಸ–ಗಾ–ರ || )—

**ದೇವಾಸ್ತೇ ಮುನಯೋಽಪಿ ಹನ್ತ ! ಬಹವಸ್ಸರ್ವೇ ಸ್ವಯಂ ಚೇತಸಾ**
**ಸ್ಮೃತ್ವಾ ತ್ವದ್ಗುಣಸಂತತಿಂ ಶಿಥಿಲಿತಸ್ವಾಂಗಾ ದ್ರವೀಭೂಯ ಚ|**
**ಮಾಲಾತೀರ್ಥ ಸುಗಂಧಧೂಪಸಹಿತಾಸ್ತ್ವಾಂ ಚೇನ್ನಮನ್ತ್ಯಚ್ಯುತಂ,**
**ಮಾಯಿನ್! ಸರ್ವಪದಾರ್ಥಮೂಲ! ಮಲಿನಂ ಕಿಂ ಸ್ಯಾನ್ನ ತೇ ವೈಭವಮ್?**

ತಾ|| (ದೇವಾದಿಗಳೂ ಕೂಡ ಕರಣತ್ರಯದಿಂದ ನಿನ್ನ ಮಹಿಮೆಗೆ ಮಾಲಿನ್ಯವನ್ನೇ ಉಂಟುಮಾಡುವರಲ್ಲವೆ ಎಂದು ಇಲ್ಲಿ ಹೇಳುತ್ತಾರೆ.) ಅನಿಮಿಷರಾದ ದೇವತೆಗಳೂ, ಮನನಶೀಲರಾದ ಸನಕಾದಿ ಮಹರ್ಷಿಗಳೂ ಮುಂತಾದ ಅಸಂಖ್ಯಾತ ಚೇತನವರ್ಗಗಳೂ ನಿನ್ನ ಗುಣಗಳನ್ನು ಮನಸ್ಸಿನಿಂದ ಸ್ಮರಿಸಿ ಶರೀರದಲ್ಲಿ ಶೈಥಿಲ್ಯವನ್ನು ಪಡೆದು ದ್ರವೀಭೂತಚಿತ್ತರಾಗಿ ಕುಸುಮಮಾಲಾ ತೀರ್ಥ ಚಂದನ ಧೂಪಾದಿಗಳೊಡನೆ ಬಂದು ನಿನಗೆ ನಮಸ್ಕಾರವನ್ನು ಮಾಡಿದರೆ–ಎಲೈ ಸರ್ವ ಜಗತ್ಕಾರಣಭೂತನಾದ ಆಶ್ಚರ್ಯಗುಣಚೇಷ್ಟಿತನಾದ ಸರ್ವೇಶ್ವರನೇ! ದಿವ್ಯಸಂಕಲ್ಪವುಳ್ಳ ಅಪಾರವಾದ ನಿನ್ನ ಮಹಿಮೆಗೆ ಅದರಿಂದ ಮಾಲಿನ್ಯ ಉಂಟಾಗದೋ ? (ಹೀಗೆಯೇ ನಾನು ಮಾಡುವ ಸೇವೆಯೂ ನಿನ್ನ ವಿಷಯದಲ್ಲಿ ಅಯುಕ್ತವೆಂದು ಭಾವವು.)

(೩) ಮಾಯೋನಿಕಳಾಯ್ ನಡೈಕಣ್ಡ ವಾನೋರ್ ಪಲರುಮ್
ಮುನಿವರುಮ್,
ನೀ ಯೋನಿಕಳೈ ಪ್ಪಡೈಯೆನ್ಱು ನಿಱೈನಾನ್ಮುಕನೈ
ಪ್ಪಡೈತ್ತಾನ್,
ಶೇಯೋನೆಲ್ಲಾವಱಿವುಕ್ಕುಮ್ ದಿಶೈಕಳೆಲ್ಲಾಮ್ ತಿರುವಡಿ
ಯಾಲ್
ತಾಯೋನ್, ಎಲ್ಲಾವೆವ್ವುಯಿರ್ಕ್ಕುಮ್ ತಾಯೋನ್
ತಾನೋರುರುವನೇ.

ಪ್ರ॥ ಮಾಯೋನಿಕಳಾಯ್ – ವಿಲಕ್ಷಣವಾದ ಜನ್ಮವುಳ್ಳವರಾಗಿ, ನಡೈ – ಸೃಷ್ಟ್ಯಾದಿವ್ಯಾಪಾರವನ್ನು, ಕಣ್ಡ – ತಿಳಿದಿರುವ, ಪಲರುಮ್ – ಬಹುವಿಧವಾದ, ವಾನೋರ್–ದೇವತೆಗಳನ್ನೂ, ಮುನಿವರುಮ್ – ಋಷಿಗಳನ್ನೂ, ಯೋನಿಕಳೈ– ಇನ್ನೂ ಅನೇಕ ಜಂತುಗಳನ್ನೂ, ನೀಪಡೈಯೆನ್ಱು–ನೀನು ಸೃಷ್ಟಿಸು ಎಂದು, ನಿಱೈ– ಸೃಷ್ಟಿಗೆ ಬೇಕಾದ ಜ್ಞಾನಾದಿಗಳಿಂದ ಪೂರ್ಣನಾದ, ನಾನ್ಮುಕನೈ–ಚತುರ್ಮುಖನನ್ನು, ಪಡೈತ್ತಾನ್–ಸೃಷ್ಟಿಸಿದವನಾಗಿ, ಎಲ್ಲಾ ಅಱಿವುಕ್ಕುಮ್–ಸಕಲಚೇತನರ ಜ್ಞಾನ ಗಳಿಗೂ, ಶೇಯೋನ್–ದೂರಸ್ಥನಾಗುವಂತೆ ಅಪಾರಮಹಿಮೆಯುಳ್ಳವನಾಗಿ, ದಿಶೈ ಕಳೆಲ್ಲಾಮ್–ಸರ್ವದಿಕ್ಕುಗಳಲ್ಲಿ ಇರುವ ಸಕಲ ಲೋಕಗಳನ್ನೂ, ತಿರುವಡಿಯಾಲ್– (ಸುಕುಮಾರವಾದ) ತನ್ನ ಪಾದಗಳಿಂದ, ತಾಯೋನ್ – ಅಳೆದವನಾಗಿ, ಎಲ್ಲಾ ಎವ್ವುಯಿರ್ಕ್ಕುಮ್–ಸಕಲವಿಧವಾದ ಸರ್ವಪ್ರಾಣಿಗಳಿಗೂ, ತಾಯೋನ್–ತಾಯಿಯಂತೆ ವತ್ಸಲನಾದ, ತಾನ್–ತಾನು, ಓರುರುವನೇ – ಒಂದೇರೂಪವುಳ್ಳವನಾಗಿದಾನಷ್ಟೆ.

( ಸ–ಗಾ–ರ ॥ )—

**ದೇವಾದೀಂಶ್ಚ ಮುನೀನ್ ಬಹೂನಪಿ ಸೃಜ ತ್ವಂ ಸರ್ವಜಂತೂನಪೀ–**
**ತ್ಯೇವಂ ತಂ ಚತುರಾನನಂ ಪ್ರಥಮತಃ ಸೃಷ್ಟ್ವಾಽಪ್ಯಗಮ್ಯೋ ಮತೇಃ।**
**ಲೋಕಾನಪ್ಯಖಿಲಾನ್ ಸ್ವಪಾದತಲತಃ ಕ್ರಾನ್ತ್ವಾ ಸ್ವಯಂ ಮಾತೃವ–**
**ದ್ವಾತ್ಸಲ್ಯಾಮ್ಬುಧಿರೇವ ಸರ್ವಜಗತಾಮತ್ಯದ್ಭುತಸ್ವಾಕೃತಿಃ ॥**

ತಾ॥ ವಿಲಕ್ಷಣವಾದ ಉತ್ಕೃಷ್ಟ ಜನ್ಮಗಳುಳ್ಳವರಾಗಿ ಸೃಷ್ಟ್ಯಾದಿ ವ್ಯಾಪಾರ ವನ್ನು ಚೆನ್ನಾಗಿ ತಿಳಿದಿರುವ ದೇವತೆಗಳನ್ನೂ, ಋಷಿಗಳನ್ನೂ ಮತ್ತು ಅನೇಕ

ಜಂತುಗಳನ್ನೂ ನೀನು ಸೃಷ್ಟಿಸೆಂದು ಜ್ಞಾನಾದಿಪೂರ್ಣನಾದ ಚತುರ್ಮುಖನನ್ನು ತಾನೇಸೃಷ್ಟಿಸಿ ಆಜ್ಞಾಪಿಸಿ ದವನಾಗಿಯೂ, ಆಬ್ರಹ್ಮಾದಿ ಸಕಲ ಚೇತನರ ಜ್ಞಾನಾದಿ ಗಳೂ ಗೋಚರವಾಗದಂತಿರುವ ಅಪಾರಮಹಿಮೆಯುಳ್ಳವನಾಗಿಯೂ, ಸಕಲ ಲೋಕ ಗಳನ್ನೂ ತನ್ನ ಪಾದಗಳಿಂದ ಅಳೆದು ಸಕಲ ಪ್ರಾಣಿಗಳಿಗೂ ತಾಯಿಯಂತೆ ವತ್ಸಲ ನಾಗಿ ಪೋಷಕನಾಗಿಯೂ ಇರುವ ತಾನು ಏಕರೂಪನಾಗಿರುತ್ತಾನಷ್ಟೆ ?

(೪) ತಾನೋರುರುವೇ ತನಿವಿತ್ತಾಯ್ ತ್ತನ್ನಿಲ್‌ಮೂವರ್
ಮುದಲಾಯ,
ವಾನೋರ್ ಪಲರುಮ್ ಮುನಿವರುಮ್ ಮತ್ರುಮ್
ಮತ್ರುಮ್ ಮುತ್ರುಮಾಯ್,
ತ್ತಾನೋರ್ ಪೆರುನೀರ್ ತನ್ನುಳ್ಳೇ ತೋತ್ರಿ ಯದನುಳ್
ಕಣ್ವಳರುಮ್,
ವಾನೋರ್ ಪೆರುಮಾನ್ ಮಾಮಾಯನ್ ವೈಕುನ್ದನೆಮ್ಪೆರು
ಮಾನೇ.

ಪ್ರ॥ ತಾನ್–ಎಲ್ಲರಿಗೂ ಮೊದಲು ಒಬ್ಬನೇ ಆಗಿದ್ದ ತಾನು, ಓರುರುವೇ– ಏಕರೂಪನಾಗಿಯೇ ಇದ್ದುಕೊಂಡು, ತನಿ–ನಿಮಿತ್ತಕಾರಣ ರಹಿತನಾದುದರಿಂದ ಏಕಾಕಿಯಾಗಿ, ವಿತ್ತಾಯ್–ಉಪಾದಾನ ಕಾರಣವಾಗಿ, ತನ್ನಿಲ್ – ತನ್ನೊಳು (ತನ್ನ ಸಂಕಲ್ಪಸ್ವರೂಪದೊಳು), ಮೂವರ್–ಬ್ರಹ್ಮರುದ್ರೇಂದ್ರರು ಮೂವರೂ ಮುದಲಾಯ–ಮೊದಲಾದ, ವಾನೋರ್–ದೇವತೆಗಳೂ, ಮುನಿವರುಮ್ – ಋಷಿ ಗಳೂ (ಆದ), ಪಲರುಮ್–ಅನೇಕವಿಧ ಚೇತನರೂ, ಮತ್ರುಮ್–ಮನುಷ್ಯ ಜಾತಿಯೂ, ಮತ್ರುಮ್–ತಿರ್ಯಗ್ಜಾತಿಯೂ, ಸ್ಥಾವರ ಜಾತಿಯೂ, ಮುತ್ರುಮಾಯ್ –ಎಲ್ಲವೂ ಆಗಿ (ಹೀಗೆ ಬಹುಪ್ರಕಾರವಾಗಿ), ತಾನ್–ಇಂತಹ ಸಂಕಲ್ಪಯುಕ್ತನಾದ ತಾನು, ತನ್ನುಳ್ಳೇ–ತನ್ನ ಸ್ವರೂಪದಲ್ಲೇ, ಓರ್–ಅದ್ವಿತೀಯವಾದ, ಪೆರುನೀರ್– ಏಕಾರ್ಣವರೂಪವಾದ ಕಾರಣಜಲವನ್ನು, ತೋತ್ರಿ–ಪ್ರಕಾಶಪಡಿಸಿ, ಅದನುಳ್– ಅದರೊಳು, ಕಣ್ವಳರುಮ್–ಶಯನಮಾಡುವ, ವೈಕುನ್ದನ್–ವೈಕುಂಠನಾಯಕನಾದ, ವಾನೋರ್ ಪೆರುಮಾನ್–ನಿತ್ಯಸೂರಿಗಳಿಗೆ ಸ್ವಾಮಿಯಾದ, ಮಾಮಾಯನ್–ಅತ್ಯಾಶ್ಚರ್ಯ ಗುಣಚೇಷ್ಟಿತನಾದ ಭಗವನ್ತನು, ಎಮ್ಪೆರುಮಾನೇ–ನನಗೆ ಸ್ವಾಮಿಯಾದವನೇ !

( ಸ-ಗಾ-ರ ‖ )—

**ಮೂಲಂ ಸರ್ವಜಗತ್ತತೇರಪಿ ಹರಿರ್ಯಸ್ತ್ವೇಕಮೂರ್ತಿಃ ಪ್ರಭು-**
**ಸ್ಸಂಕಲ್ಪಾದ್ಬಹುಧಾ ಭವನ್ ವಿಜಯತೇ ದೇವಾತ್ಮ ಮೂರ್ತಿತ್ರಯಮ್ |**
**ಏವಂ ತೇ ಮುನಯೋಽಪಿ ಮಾನವಗಣಾಸ್ತಿರ್ಯಞ್ಚಮುಖಾಸ್ಸ್ಥಾವರಾ-**
**ಸ್ಸರ್ವಂ ಚ ಸ್ವಯಮೇವ ಚಾಬ್ಧಿಶಯನೋ ವೈಕುಂಠರಾಟ್ಮೇ ಪ್ರಭುಃ‖**

ತಾ‖ ಸರ್ವ ಲೋಕಸೃಷ್ಟಿಗೂ ಮೊದಲು ಒಬ್ಬನೇ ಆಗಿದ್ದ ತಾನು ನಿಮಿತ್ತಾನ್ತರನಿರಪೇಕ್ಷನಾಗಿಯೂ ಸಹಕಾರಿನಿರಪೇಕ್ಷನಾಗಿಯೂ ಉಪಾದಾನಕಾರಣಭೂತನಾಗಿಯೂ ತಾನೇ ಇದ್ದುಕೊಂಡು ತನ್ನಲ್ಲಿಯೇ ತನ್ನ ಸಂಕಲ್ಪದಿಂದಲೇ ಬ್ರಹ್ಮರುದ್ರೇಂದ್ರಾದಿ ದೇವತೆಗಳೂ, ಮನುಷ್ಯ ತಿರ್ಯಕ್ಸ್ಥಾವರಾದಿ ಜಾತಿಗಳೂ ಎಲ್ಲವೂ ತೋರುವಂತೆ ತಾನೇ ಬಹುತ್ವವಿಶಿಷ್ಟನಾಗಿ, ಏಕಾರ್ಣವರೂಪವಾದ ಕಾರಣಜಲದಲ್ಲಿ ಶಯನಮಾಡುವ ವೈಕುಂಠನಾಥನಾದ ನಿತ್ಯಸೂರೀಶ್ವರನೂ ಆಗಿ ಈಪ್ರಕಾರ ಆಶ್ಚರ್ಯಗುಣಚೇಷ್ಟಿತನಾದ ಭಗವನ್ತನು ನನ್ನ ಸ್ವಾಮಿಯಾದವನೇ ! (ಆದುದರಿಂದ ಈ ಸಂಬಂಧವನ್ನು ತಿಳಿದು ನಾನು ಅವನಿಗೆ ಸರ್ವವಿಧಕೈಂಕರ್ಯವನ್ನೂ ಅವನ ಸೌಶೀಲ್ಯಗುಣಕ್ಕನುಗುಣವಾಗಿ ಮಾಡುವೆನು—ಎಂದು ಭಾವವು.)

(೫೫) ಮಾನೇಯ್ ನೋಕ್ಕಿಮಡವಾಳೈ ಮಾರ್ಬಿಲ್ಕೊಂಡಾಯ್
ಮಾದವಾ,
ಕೂನೇಶಿದೈಯ ವುಂಡೈವಿಲ್‌ನಿಱತ್ತಿಲ್ ತೆಱಿತ್ತಾಯ್
ಗೋವಿನ್ದಾ,
ವಾನಾರ್‌ಶೋದಿ ಮಣಿವಣ್ಣಾ ಮದುಶೂದಾ ನೀಯುರು
ಳಾಯ್, ಉನ್
ತೇನೇಮಲರುನ್ತಿರುಪ್ಪಾದಮ್ ಶೇರುಮಾಱು ವಿನೈಯೋನೇ.

ಪ್ರ‖ ಮಾನೇಯ್-ಹುಲ್ಲೆಯ ಕಣ್ಣಿಗೆ ಸದೃಶವಾದ, ನೋಕ್ಕಿ-ಕಣ್ಣುಗಳುಳ್ಳ, ಮಡವಾಳೈ-ಭವ್ಯೆಯಾದ ನಾರೀಮಣಿಯನ್ನು (ಲಕ್ಷ್ಮೀದೇವಿಯನ್ನು), ಮಾರ್ಬಿಲ್-ವಕ್ಷಸ್ಥಲದಲ್ಲಿ, ಕೊಂಡಾಯ್-ಧರಿಸಿದವನಾಗಿಯೂ, ಮಾಧವಾ-ಆದುದರಿಂದ ಮಾಧವನೆಂದು ಹೆಸರುಳ್ಳವನಾಗಿಯೂ, ಕೂನೇ-ಕೂನಿಯ (ಕುಬ್ಜೆಯ) ಗೂನು ಮಾತ್ರ, ಶಿದೆಯ-ಹೋಗುವಂತೆ, ಉಂಡೈವಿಲ್‌ನಿಱತ್ತಿಲ್-ಬಗ್ಗಿದ ಧನುಸ್ಸನ್ನು ನೆಟ್ಟಗೆಮಾಡುವಂತೆ, ತೆಱಿತ್ತಾಯ್-ನೆಟ್ಟಗೆ ಮಾಡಿದವನಾಗಿಯೂ,

ಗೋವಿನ್ದಾ–ಪಶುಗಳಿ ರಕ್ಷಕನಾಗಿಯೂ, ವಾ॰ ಆರ್–ಪರಮಪದದಲ್ಲೂ ವ್ಯಾಪಿಸಿ ಪೂರ್ಣವಾದ, ಶೋದಿ–ಕಾಂತಿಯುಳ್ಳ, ಮಣಿವಣ್ಣಾ–ಮಾಣಿಕ್ಯವರ್ಣನಾಗಿಯೂ, ಇರುವ, ಮದುಶೂದಾ–ಆಶ್ರಿತವಿರೋಧಿಯಾದ ಮಧುವೆಂಬ ರಾಕ್ಷಸನನ್ನು ಧ್ವಂಸ ಮಾಡಿದವನೇ! ನೀ–ನೀನು, ಉ॰–ನಿನ್ನ, ತೇನೇನುಲರುಮ್ ತಿರುಪ್ಪಾದಮ್–ಮಧುಸ್ಯಂದಿಯಾದ ಪಾದಾರವಿಂದಗಳನ್ನು, ವಿನೈಯೇ॰–ಪಾಪಿಯಾದ ನಾನು, ಶೇರುಮ್ ಆ॰–ಸೇರುವ ಪ್ರಕಾರವನ್ನು, ಅರುಳಾಯ್–ನನಗೆ ಕೃಪೆಮಾಡಿ ಅನುಗ್ರಹಿಸು.

( ಸ–ಗಾ–ರ ॥ )—

**ಲಕ್ಷ್ಮೀಂ ತಾಂ ಮೃಗಲೋಚನಾಂ ಶುಭಗುಣಾಂ ಧೃತ್ವಾ ಸ್ವಯಂ ವಕ್ಷಸಿ**
**ಶ್ರೀಮಾ॰! ಚಾಪಮಿವ ಸ್ವಯಂ ಕಿಲ ಹರೇ! ಕುಬ್ಜಾಮೃಜೂಕೃತ್ಯ ತಾಮ್ ।**
**ಗೋವಿನ್ದೋ ಮಧುಸೂದನೋ ಮಣಿನಿಭಸ್ತ್ವಂ ಜ್ಯೋತಿಷಾಂ ಭಾಸ್ವರ**
**ಸ್ತ್ವತ್ಪಾದಾಬ್ಜಯುಗಂ ಕಥಂ ಬತ! ಸುಧಾಸ್ಯಂದಿ ತ್ವಘೀ ಪ್ರಾಪ್ನುಯಾಮ್ ॥**

ತಾ॥ ಎಲೈ ಮಧುಸೂದನನೇ! ಮೃಗನಯನೆಯಾದ ಲಕ್ಷ್ಮೀದೇವಿಯನ್ನು ನಿನ್ನ ವಕ್ಷಸ್ಸಿನಲ್ಲಿ ಧರಿಸಿ ಮಾಧವನೆಂದು ಪ್ರಸಿದ್ಧನಾಗಿ ಕುಬ್ಜೆಯಗೂನನ್ನು ನಿವಾರಣ ಮಾಡಿ, ಪಶುಗಳನ್ನು ರಕ್ಷಿಸಿ ಗೋವಿನ್ದನೆಂಬ ನಾಮವುಳ್ಳವನಾಗಿ ಮಣಿವರ್ಣನಾಗಿರುವ ನಿನ್ನ ತೇಜಸ್ಸು ಪರಮಪದದೊಳಗೂ ವ್ಯಾಪಿಸಿರುತ್ತಷ್ಟೆ. ಇಂತಹ ನಿನ್ನ ಮಧುಸ್ಯಂದಿಯಾದ ಪಾದಾರವಿನ್ದಗಳನ್ನು ಪಾಪಿಯಾದ ನಾನು ಹೊಂದುವ ಪ್ರಕಾರ ವನ್ನು ನನಗೆ ಅನುಗ್ರಹಿಸು.

(೬) ವಿನೈಯೇ॰ ವಿನ್ಸೈತೀರ್ ಮರುನ್ದಾನಾಯ್‌ವಿಣ್ಣೋರ್
ತಲೈವಾ ಕೇಶವಾ,
ಮನೈಶೇರಾಯರ್ ಕುಲಮುದಲೇ ಮಾಮಾಯನೇ
ಮಾದವಾ,
ಶಿನೈಯೇಯ್ ತಳೈಯ ಮರಾಮರಙ್ಗಳೇಳುಮೆಯ್‌ದಾಯ್
ಶಿರೀದರಾ,
ಇನೈಯಾಯಿನೈಯ ಪೆಯರಿನಾಯ್‌ಎನ್ಱು ನೈವನಡಿಯೇನೇ.

ಪ್ರ|| ವಿನ್ನೈಯೇ೯-ಪಾಪಿಯಾದ ನನ್ನ, ವಿನೈ-ಪಾಪಕ್ಕೆ, ತೀರ್-ಶಾಂತಿಕರ ವಾದ, ಮರುನ್ದಾನಾಯ್-ದಿವ್ಯೌಷಧವಾದವನೇ, ವಿಣ್ಣೋರ್-ನಿತ್ಯಸೂರಿಗಳಿಗೆ, ತಲೈವಾ-ಸ್ವಾಮಿಯಾದವನೇ, ಕೇಶವಾ-ಕೇಶವನೇ, ಮನ್ನೈಶೇರ್-ಗುಡಿಸಲುಗಳಲ್ಲಿ ವಾಸಮಾಡುವ, ಆಯರ್-ಗೋಪರ, ಕುಲಮ್-ಕುಲಕ್ಕೆ, ಮುದಲೇ-ಮೂಲಭೂ ತನೇ, ಮಾಮಾಯನೇ-ಅತ್ಯಾಶ್ಚರ್ಯಗುಣಚೇಷ್ಟಿತನೇ, ಮಾದವಾ-ಶ್ರಿಯಃಪತಿಯೇ, ಶಿನ್ನೈ ಏಯ್-ಅಂಕುರ(ಚಿಗರು)ಗಳೊಡನೆ ಕೂಡಿದ, ತಟಾ೯ಯ-ಎಲೆಗಳುಳ್ಳ, ಮರಾ ಮರಙ್ಗಳ್ಏೞುಮ್-ಸಪ್ತಸಾಲ ವೃಕ್ಷಗಳನ್ನೂ, ಎಯ್‌ದಾಯ್-ಭೇದಿಸಿದವನೇ, ಶಿರೀದರಾ-ಆದುದರಿಂದ ವೀರ ಶ್ರೀಧರನೇ, ಇನ್ನೈಯಾಯ್-ಇಂತಹ ಸ್ವಭಾವವುಳ್ಳ ವನೇ, ಇನ್ನೈಯಪೆಯರಿನಾಯ್ ಎನ್ಱು-ಇಂತಹ ನಾಮಧೇಯವುಳ್ಳವನೇ ಎಂದು, ಅಡಿಯೇ೯-ದಾಸಭೂತನಾದ ನಾನು, ನೈವ೯-(ಚಿಂತಿಸಿ) ಕೃಶನಾಗುತ್ತಿದೇನೆ.

( ಸ-ಗಾ-ರ || )—

**ಪಾಪಿಷ್ಠಸ್ಯ ಚ ಪಾಪಶಾನ್ತಿವಿಧಯೇ ದಿವ್ಯೌಷಧಾತ್ಮಾಽಸಿ ಮೇ !**
**ಸೂರೀಣಾಮಪಿ ಸರ್ವತಃ ಪರಿಭೃಢಸ್ತ್ವಂ ಕೇಶವೋಽಸಿ ಪ್ರಭೋ !**
**ಗೋಪಾನಾಂ ಕುಲಮೂಲನಾಯಕ ! ವಿಭೋ ! ಮಾಯಾಮಯೋ ಮಾಧವ !**
**ತ್ವಂ ವೈ ಸಪ್ತತರುಚ್ಛಿದೇವ ಬಹುಧಾ ತ್ವಾಂ ಚಿನ್ತಯೇ ಶ್ರೀಧರ ! ||**

ತಾ|| ಪಾಪಿಯಾದ ನನ್ನ ಪಾಪಶಾನ್ತಿಗೆ ದಿವ್ಯೌಷಧವಾಗಿರುವವನೇ, ನಿತ್ಯ ಸೂರಿಗಳಿಗೆ ಸ್ವಾಮಿಯಾದವನೇ, ಬ್ರಹ್ಮರುದ್ರಾದಿಗಳಿಗೂ ಕಾರಣಭೂತನಾದ ಕೇಶ ವನೇ, ಗೋಪಕುಲಕ್ಕೆ ಮೂಲನಾಯಕನೇ, ಅತ್ಯಾಶ್ಚರ್ಯಗುಣಚೇಷ್ಟಿತನೇ, ಮಾಧ ವನೇ, ಸಪ್ತಸಾಲಚ್ಛೇದನವನ್ನು ಮಾಡಿದವನಾದುದರಿಂದ ವೀರ ಶ್ರೀಯನ್ನು ಧರಿ ಸಿರುವ ಶ್ರೀಧರನೇ, ಇಂತಹ ಸ್ವಭಾವವುಳ್ಳವನೇ, ಇಂತಹ ನಾಮಧೇಯವುಳ್ಳ ವನೇ— ಎಂದು ನಿನ್ನ ದಾಸನಾದ ನಾನು ನಾನಾಪ್ರಕಾರಗಳಿಂದ ಚಿಂತಿಸಿ ಕೃಶನಾಗು ತ್ತಿದೇನೆ.

(೭) ಅಡಿಯೇ೯ ಶಿಱಿಯ ಞಾನತ್ತನೆಱಿದಲಾರ್ಕ್ಕುಮರಿಯಾನೈ,
ಕಡಿಶೇರ್ ತಣ್ಣನ್ದುೞಾಯ್‌ಕ್ಕಣ್ಣಿ ಪುನೈನ್ದಾ೯ತನ್ನೈಕ್ಕಣ್ಣನೈ,
ಶೆಡಿಯಾರಾಕ್ಕೈಯಡಿಯಾರೈ ಚ್ಚೇರ್‌ದಲ್ ತೀರ್ಕ್ಕುನ್ದಿರುಮಾಲೈ,
ಅಡಿಯೇ೯ ಕಾಣ್ಬಾನಲಱ್ಱುವನಿಪನಿಲ್ ಮಿಕ್ಕೋರ್ಯುರ್ವಣ್ಣ್ನೇ.

ಪ್ರ|| ಶಿತ್ತಿರಯಾಣಾನತ್ತ್ರೇ–ಅಲ್ಪಜ್ಞನಾದ, ಅಡಿಯೇನ್–ನಾನು, ಆರ್ಕುಮ್– ಎಂತಹಜ್ಞಾನಾಧಿಕರಿಗೂ, ಅತ್ತಿದಲ್ ಅರಿಯಾನ್ಯೈ–ತಿಳಿಯಲಶಕ್ಯನಾದವನಾಗಿಯೂ, ಕಡಿ–ಪರಿಮಳವು, ಶೀರ್–ಸೇರಿರುವ (ವ್ಯಾಪಿಸಿರುವ), ತಣ್–ಶೀತಲವಾದ, ಅಮ್ –ರಮ್ಯವಾದ, ತುೞಾಯ್ ಕಣ್ಣಿ–ತುಲಸೀಮಾಲೆಯನ್ನು, ಪುನೈನ್ದಾನ್ತನ್ನೈ–ಧರಿಸಿದವನಾಗಿಯೂ, ಕಣ್ಣನೈ – ಶ್ರೀಕೃಷ್ಣರೂಪಿಯಾಗಿಯೂ, ಕಡಿ ಆರ್–ಸಂಸಾರ ಕಾನ್ತಾರಸಂಸಕ್ತನಾದ, ಆಕ್ಕೈ–ಶರೀರದ ಸಂಬಂಧವನ್ನು, ಅಡಿಯಾರ್ಕ್ಕೆ ಶೀರ್ ದಲ್ ತೀರ್ಕ್ಕುಮ್–ತನ್ನ ಆಶ್ರಿತರು ಹೊಂದದಂತೆ ಮಾಡಿ ರಕ್ಷಿಸುವವನಾಗಿಯೂ ಇರುವ, ತಿರುಮಾಲೈ–ಶ್ರಿಯಃಪತಿಯಾದ ಭಗವನ್ತನನ್ನು, ಅಡಿಯೇನ್–(ನಾನು ಶೇಷಭೂತನಾಗಿದ್ದಾಗ್ಯೂ, ಕಾಣ್ಬಾನ್–ಕಾಣಬೇಕೆಂದು, ಅಲಱ್ರುವನ್–ಆಶೆಯಿಂದ ಮೊರೆಯಿಡುತ್ತಿದೇನೆ. ಇದನಿಲ್–ಇದಕ್ಕಿಂತ, ಮಿಕ್ಕ–ಅಧಿಕವಾದ, ಓರ್ ಅಯರ್ವು –ಒಂದು ಮೌಢ್ಯವು, ಉಂಡೇ–ಉಂಟೋ ?

( ಸ–ಗಾ–ಶ || )—

**ಅಲ್ಪಜ್ಞೋಽಸ್ಮಿ ಹಿ ದಾಸ ಏಷ ಮಹತಾಂ ತಂ ಜ್ಞಾನಿನಾಂ ದುರ್ಲಭಂ**
**ಶ್ರೀಕೃಷ್ಣಂ ತುಲಸೀಸ್ರಗಂಚಿತಮಪಿ ಶ್ರೀಶಂ ಭವಾರ್ತಿಚ್ಛಿದಮ್ ।**
**ದ್ರಷ್ಟುಂ ಹಾ ! ಬತ ! ಕಾಮಯೇಽದ್ಯ ಮನಸಾ ಮೂಢೋಽಸ್ಮಿ**
**ಪಾಹೀ ಸ್ವಯಂ**
**ಕಿಂ ವೇಶಃಪರಮಸ್ತಿ ಮೌಢ್ಯಮಧಿಕಂ ದೃಷ್ಟಂ ಶ್ರುತಂ ವಾ ಕ್ವಚಿತ್?||**

ತಾ|| ಅಲ್ಪಜ್ಞನಾಗಿಯೂ ದಾಸಭೂತನಾಗಿಯೂ ಇರುವ ನಾನು, ಉತ್ಕೃಷ್ಟ ಜ್ಞಾನವುಳ್ಳ ಮಹಾತ್ಮರಿಗೂ ಕೂಡ ತಿಳಿಯಲಶಕ್ಯನಾಗಿಯೂ, ದಿವ್ಯ ತುಲಸೀ ಮಾಲಾಧರನಾಗಿಯೂ, ಶ್ರೀ ಕೃಷ್ಣಸ್ವರೂಪಿಯಾಗಿಯೂ, ಸಂಸಾರಕಾನ್ತಾರಚ್ಛೇದಿಯಾಗಿಯೂ ಇರುವ ಶ್ರಿಯಃಪತಿಯಾದ ಭಗವನ್ತನನ್ನು ಕಾಣಬೇಕೆಂದು ಅತ್ಯನ್ತ ಕುತೂಹಲದಿಂದ ಮೊರೆಯಿಡುತ್ತಿದೇನೆ ಇದಕ್ಕಿಂತ ಅಧಿಕನಾದ ಮೌಢ್ಯವು ಯಾವುದಾದರೂ ಉಂಟೆ ? (ಎಂದು ಶ್ರೀ ಶಠಾರಿ ಮುನಿವರ್ಯರು ತಮ್ಮನ್ನು ಗರ್ಹಣ ಮಾಡಿ ಹಿಂಚರಿಯುತ್ತಾರೆಂದು ಭಾವವು.)

(೮) ಉಣ್ಡಾಯುಲಕೇೞ್ ಮುನ್ನಮೇ, ಯುಮಿೞ್ನ್ದು
ಮಾಯೈಯಾಲ್ ಪುಕ್ಕು.
ಉಣ್ಡಾಯ್ ವೆಣ್ಣೆಯ್ ಶಿಱುಮನಿಶರುವಲೈಯಾಕ್ಕೈ
ನಿಲೈಯೆಯ್ದಿ,
ಮಣ್ತಾನ್ ಶೋರ್ನ್ದದುಣ್ಡೇಲುಮ್ ಮನಿಶರ್ಕ್ಕಾಕುಂಪೀರ್,
ಶಿಱಿದುಮ್
ಅಣ್ಡಾವಣ್ಣಮಣ್ಕರೈಯ ನೆಯ್ಯೂಣ್ ಮರುನ್ದೋ
ಮಾಯೋನೇ.

ಪ್ರ|| ಮಾಯೋನೇ–ಆಶ್ಚರ್ಯಭೂತನೇ, ಮುನ್ನಮೇ–ಪೂರ್ವಕಾಲದಲ್ಲಿಯೇ, ಉಲಕೇೞುಮ್–ಸಪ್ತಲೋಕಗಳನ್ನೂ, ಉಂಡಾಯ್–(ನೀನು) ಭಕ್ಷಿಸಿದೆ, ಉಮಿೞ್ನ್ದು–(ಅವುಗಳನ್ನು) ಪುನಃ ಉಗಿದು(ಸೃಷ್ಟಿಸಿ), ಶಿಱುಮನಿಶರ್–ಅಲ್ಪರಾದ ಮನುಷ್ಯರ, ಉವಲೈ–ಹೇಯವಾದ, ಆಕ್ಕೈ–ಶರೀರದ, ನಿಲೈ–ಸ್ಥಿತಿಯನ್ನು, ಎಯ್ದಿ–ಹೊಂದಿ, ಮಾಯೈಯಾಲ್–ಕೃತ್ರಿಮದಿಂದ, ಪುಕ್ಕು–ಪ್ರವೇಶಿಸಿ, ವೆಣ್ಣೆಯ್–ಬೆಣ್ಣೆಯನ್ನು, ಉಣ್ಡಾಯ್–(ನೀನು) ಭಕ್ಷಿಸಿದೆ, ಮಣ್ತಾನ್–ಆ ಕಾಲದಲ್ಲಿ ಭಕ್ಷಿಸಿದ ಮಣ್ಣಿನ ಲೇಶಾಂಶವೂ, ಶೋರ್ನ್ದದುಣ್ಡೇಲುಮ್–ಜೀರ್ಣವಾಗದೇ ನಿಂತಿದ್ದರೂ, ಮನಿಶರ್ಕ್ಕು–ಮನುಷ್ಯರಿಗೆ, ಆಕುಮ್–ಆಗುವ, ಪೀರ್–ಬಿಳೀಮಾಂದವೆಂಬ ರೋಗವು, ಶಿಱಿದುಮ್–ಅಲ್ಪವೂ, ಅಣ್ಡಾವಣ್ಣಮ್–ಬಾರದಂತೆ, ಮಣ್–ಆ ಮಣ್ಣು, ಕರೈಯ–ಕರಗಿಹೋಗುವಂತೆ ಮಾಡುವುದಕ್ಕೆ, ನೆಯ್ ಊಣ್–(ಬೇರೆ ಅವತಾರದಲ್ಲಿ) ತುಪ್ಪವನ್ನು ಭಕ್ಷಿಸೋಣವು, ಮರುನ್ದೋ–ಔಷಧವೋ ? (ಅಲ್ಲವಷ್ಟೆ).

( ಶ–ಗಾ–ರ || )—

**ಮಾಯಾಚೇಷ್ಟಿತ ! ಪೂರ್ವಮೇವ ಹಿ ಭವಾನ್ ಭುಜ್ಕ್ತ್ವಾಽಸ್ತ ಲೋಕಾನ್ ನಿಮಾನ್**
**ಸಪ್ತಾಪಿ ಸ್ವಯಮುದ್ಗಿರನ್ನಪಿ ಪುನರ್ಜಾತೋ ಮನುಷ್ಯಾತ್ಮನಾ |**
**ಏವಂ ಕಿಂ ನವನೀತಭುಕ್ ಪುನರಭೂಃ ! ಪೂರ್ವೋಕ್ತ ಮೃದ್ಭಕ್ಷಣಾ–**
**ಚ್ಛೇಷಂ ಕಿಂ ದ್ರವಯೇಸ್ಸಿತತ್ವಹಕಯೇ ದಿವ್ಯೌಷಧಂ ಕಿಂ ಘೃತಮ್?||**

ತಾ|| ಎಲೈ ಮಾಯಾಚೇಷ್ಟಿತನೇ! ನೀನು ಪೂರ್ವದಲ್ಲಿ ಏಳು ಲೋಕಗಳನ್ನೂ ಭಕ್ಷಿಸಿ ಪುನಃ ಅವುಗಳನ್ನು ಉಗಿದು ಮನುಷ್ಯಶರೀರದಲ್ಲೂ ಪ್ರವೇಶಿಸಿ ಬೆಣ್ಣೆಯನ್ನು

ಕದ್ದು ಭಕ್ಷಿಸಿದೆಯಷ್ಟೆ. ಹಿಂದೆ ನೀನು ಲೋಕಗಳನ್ನು ಭಕ್ಷಿಸಿದಾಗ ಜೀರ್ಣವಾಗದೆ ನಿಂತಿದ್ದ ಮಣ್ಣಿನಶೇಷವು ಏನಾದರೂ ಇದ್ದರೆ ಬಿಳೀಮಾಂದವೆಂಬ ಅಜೀರ್ಣ ರೋಗವು ಸ್ವಲ್ಪವೂ ನಿನಗೆ ಉಂಟಾಗದೆ ಇರುವಂತೆ ಆ ಮಣ್ಣು ಕರಗಿಹೋಗುವುದಕ್ಕೆ ಮತ್ತೊಂದು ಅವತಾರದಲ್ಲಿ (ಕೃಷ್ಣಾವತಾರದಲ್ಲಿ) ತುಪ್ಪವನ್ನು ಭಕ್ಷಿಸೋಣವು ಔಷಧವೋ? (ಅಲ್ಲವಷ್ಟೆ–ಎಂದು ಪರಿಹಾಸಮಾಡುತ್ತಾರೆ). ಇದರಿಂದ ಆಶ್ರಿತರೊಡನೆ ಸಂಶ್ಲೇಷಮಾಡುವುದೇ ನಿನ್ನ ಸ್ವಭಾವವಾದುದರಿಂದ ನೀನು ಕೃಷ್ಣಾವತಾರದಲ್ಲಿ ಹೀಗೆ ಮಾಡಿದೆಯಲ್ಲವೆ?—ಎಂದು ತಾತ್ಪರ್ಯ.

(೯) ಮಾಯೋಮ್ ತೀಯ ಅಲವಲೈ ಪ್ಪೆರುಮಾವಞ್ಜ
ಪ್ಪೇಯ್ ವೀಯ.
ತೂಯಕುೞವಿಯಾಯ್ ವಿಡಪ್ಪಾಲಮುದಾಯ ಅಮುದು
ಶೆಯ್‌ದಿಟ್ಟ,
ಮಾಯನ್, ವಾನೋರ್ ತನಿತ್ತಲೈವನ್ ಮಲರಾಳ್‌ಮೈನ್ದ
ಎವ್ವುಯಿರ್ಕ್ಕುಮ್
ತಾಯೋನ್, ತಮ್ಮಾನೆನ್ನಮ್ಮಾನಮ್ಮಾಮೂರ್ತ್ತಿಯೈ
ಚ್ಚಾರ್‌ನ್ದೇ.

ಪ್ರ॥ ತೀಯ–ಕೆಟ್ಟಭಾವಗಳುಳ್ಳ, ಅಲವಲೈ–ಉನ್ಮತ್ತ ಜಲ್ಪನವುಳ್ಳ, ಪೆರುಮಾವಞ್ಜಮ್ – ಅಪರಿಮಿತವಾದ ವಂಚನೆಯುಳ್ಳ, ಪೇಯ್ – (ಪೂತನೆಯೆಂಬ) ರಾಕ್ಷಸಿಯು, ವೀಯ–ನಾಶಹೊಂದುವಂತೆ, ತೂಯ – ಪರಿಶುದ್ಧವಾದ, ಕುೞವಿಯಾಯ್ – ಬಾಲ್ಯವುಳ್ಳವನಾಗಿ, ವಿಡಮ್‌ಪಾಲ್ – ವಿಷಮಿಶ್ರವಾದ ಹಾಲನ್ನು, ಅಮುದಾಯ್–ಅಮೃತವಾಗುವಂತೆ, ಅಮುದು ಶೆಯ್‌ದಿಟ್ಟ–ಭಕ್ಷಿಸಿದ, ಮಾಯನ್–ಆಶ್ಚರ್ಯಸ್ವಭಾವನಾಗಿಯೂ, ವಾನೋರ್ -- ನಿತ್ಯಸೂರಿಗಳಿಗೆ, ತನಿತ್ತಲೈವನ್-- ಅದ್ವಿತೀಯ ನಿರ್ವಾಹಕನಾಗಿಯೂ, ಮಲರಾಳ್–ಕಮಲೋದ್ಭವೆಯಾದ ಲಕ್ಷ್ಮೀದೇವಿಗೆ, ಮೈನ್ದನ್--(ಯೌವನವುಳ್ಳ) ನಾಯಕನಾಗಿಯೂ, ಎವ್ವುಯಿರ್ಕ್ಕುಮ್ – ಸಕಲಚೇತನರಿಗೂ, ತಾಯೋನ್--ತಾಯಿಯಂತೆ ವತ್ಸಲನಾಗಿಯೂ, ತಮ್ಮಾನ್–ತನಗೆ ತಾನೇ ಸ್ವಾಮಿಯಾಗಿ -(ಸರ್ವೇಶ್ವರನಾಗಿ)ಯೂ, ಎನ್ನಮ್ಮಾನ್–ನನಗೆ ಸ್ವಾಮಿಯಾಗಿಯೂ ಇರುವ, ಅಮ್ಮಾಮೂರ್ತಿಯೈ–ವಿಲಕ್ಷಣವಿಗ್ರಹವುಳ್ಳ ಭಗವಂತನನ್ನು, ಶಾರ್‌ನ್ದು–ಆಶ್ರಯಿಸಿ, ಮಾಯೋಮ್- ಚ್ಯುತಿಯಿಲ್ಲದಂತೆ ಆಗುವೆವು. (ಉಜ್ಜೀವಿಸುವೆವು.)

( ಸ–ಗಾ–ರ ‖ )—

**ಮಾಯಾಂ ತಾಮಪಿ ಪೂತನಾಂ ವಿಷಮಯೀಂ ಹನ್ತುಂ ಸ್ವಯಂ ನಿರ್ಮಲೋ**
**ಬಾಲೋಽಸೌ ವಿಷಮಿಶ್ರಮಪ್ಯಮೃತವತ್ ಸ್ತನ್ಯಂ ಮಹಾತ್ಮಾಽಪಿಬತ್ |**
**ದೇವಾನಾಮಪಿ ದೇವಮೇವ ಕಮಲಾಕಾನ್ತಂ ಚ ಸರ್ವಾತ್ಮನಾಂ**
**ವಾತ್ಸಲ್ಯಾಂಬುನಿಧಿಂ ಪ್ರಭುಂ ಮಮ ವಿಭುಂ ಸಂಶ್ರಿತ್ಯ ಜೀವಾಮ ತಮ್ ‖**

ತಾ॥ ಅತ್ಯನ್ತವಂಚನೆಯುಳ್ಳ ಪೂತನೆಯೆಂಬ ರಾಕ್ಷಸಿಯ ವಿಷಮಿಶ್ರವಾದ ಸ್ತನ್ಯವನ್ನು ಅಮೃತದಂತೆ ಪಾನಮಾಡಿದ ಆಶ್ಚರ್ಯಸ್ವಭಾವವುಳ್ಳ ನಿತ್ಯಸೂರಿನಾಯ ಕನಾದ ಶ್ರಿಯಃಪತಿಯು ಸಕಲಚೇತನರಿಗೂ ತಾಯಿಯಂತೆ ವತ್ಸಲನಾಗಿಯೂ, ಸರ್ವೇಶ್ವರನಾಗಿಯೂ, ನನಗೆ ಸ್ವಾಮಿಯಾಗಿಯೂ ಇರುವುದರಿಂದ, ವಿಲಕ್ಷಣವಿಗ್ರಹ ವುಳ್ಳ ಈ ಭಗವಂತನನ್ನೇ ಆಶ್ರಯಿಸಿ ನಾವು ಉಜ್ಜೀವಿಸುವೆವು.

(೧೦) ಶಾರ್ನ್ದ ಇರುವಲ್ ವಿನೈಕಳುಂ ಶರಿತ್ತು ಮಾಯ
ಪ್ಪಱ್ಱಱುತ್ತು,
ತೀರ್ನ್ದು ತನ್ಪಾಲ್ ಮನಮ್ವೈಕ್ಕ ತ್ತಿರುತ್ತಿವೀಡು
ತಿರುತ್ತುವಾನ್,
ಆರ್ನ್ದ ಞಾನಚ್ಚುಡರಾಕಿ ಯಕಲಂಕೀೞ್ಮೇಲಳವಿಱನ್ದು,
ನೇರ್ನ್ದ ವುರುವಾಯುರುವಾಕು ಮಿವಱ್ಱಿನುಯಿರಾಮ್
ನೆಡುಮಾಲೇ.

ಪ್ರ॥ ಆರ್ನ್ದ- ಪರಿಪೂರ್ಣವಾದ, ಞಾನಚ್ಚುಡರಾಕಿ–ಸ್ವಯಂಪ್ರಕಾಶ ಜ್ಞಾನ ಪ್ರಭೆಯುಳ್ಳವನಾಗಿ, ಅಕಲಮ್–ಸುತ್ತಲೂ, ಕೀೞ್–ಕೆಳಗೂ, ಮೇಲ್–ಮೇಲೂ (ಹತ್ತುದಿಕ್ಕುಗಳಲ್ಲಿಯೂ), ಅಳವಿಱನ್ದು– ಅಪರಿಚ್ಛಿನ್ನಸ್ವರೂಪನಾಗಿ, ನೇರ್ನ್ದ– ಅತಿಸೂಕ್ಷ್ಮವಾದ, ಉರುವಾಯುರುವಾಕುಮ್–ಅಚಿತ್ತೂ, ಚಿತ್ತೂ ಆದ, ಇವ ಱ್ಱಿನ್–ಇವುಗಳಿಗೆ, ಉಯಿರಾಮ್–ಅಂತರಾತ್ಮನಾಗಿ, ನೆಡುಮಾಲ್–ನನ್ನ ವಿಷಯ ದಲ್ಲಿ ಅತ್ಯಂತವಾತ್ಸಲ್ಯವುಳ್ಳವನು (ಭಗವಂತನು), ಶಾರ್ನ್ದ – ನನ್ನೊಂದಿಗೆ ಸೇರಿರುವ, ಇರು–ಪುಣ್ಯಪಾಪವೆಂಬ ಎರಡುಪ್ರಕಾರವಾದ, ವಲ್ – ಪ್ರಬಲವಾದ, ವಿನೈಕಳುಂ–ಕರ್ಮಗಳನ್ನೂ, ಶರಿತ್ತು–ನಿರ್ಮೂಲಮಾಡಿ, ಮಾಯಮ್–ಅಜ್ಞಾನ ಕಾರ್ಯವಾದ, ಪಱ್ಱು–ವಿಷಯಸಂಗವನ್ನು, ಅಱುತ್ತು – ಛೇದಿಸಿ, ತೀರ್ನ್ದು–

ಅತ್ಯಾದರದೊಡನೆ, ತನ್ ಪಾಲ್–ತನ್ನ ವಿಷಯದಲ್ಲಿ, ಮನಮ್–ಮನಸ್ಸನ್ನು, ವೈಕ್ಕ–ಚೆನ್ನಾಗಿ ಇಡುವಂತೆ, ತಿರುತ್ತಿ–(ನನ್ನನ್ನು) ಚೆನ್ನಾಗಿ ಪರಿಷ್ಕರಿಸಿ, ವೀಡು–ಮೋಕ್ಷಸ್ಥಾನವಾದ ಪರಮಪದದಲ್ಲಿಯೂ, ತಿರುತ್ತುವಾನ್ – (ನನಗೆ) ವಿಲಕ್ಷಣವಾದ ಭೋಗ್ಯತ್ವವನ್ನುಂಟುಮಾಡುವನು.

( ಸ–ಗಾ–ರ ॥ )—

**ಪೂರ್ಣಜ್ಯೋತಿರ್ಮಯೋಽಸೌ ದಶದಿಶ ಪರಿತಶ್ಚೋಪರಿಷ್ಟಾದಧಶ್ಚ–**
**ವ್ಯಾಪ್ಯಾಸ್ತೇ ಚಾಪ್ರಮೇಯಸ್ಸಕಲಚಿದಚಿತಾಮನ್ತರಾತ್ಮಾ ಪರಾತ್ಮಾ ।**
**ಮನ್ನಾಥೋ ದ್ವನ್ದ್ವಕರ್ಮ ಪ್ರತಿಹತಿಮುಖತೋ ಮೇಽತ್ರ ಸಙ್ಗಂ ಪ್ರಹತ್ಯ**
**ಸ್ವಸ್ಮಿಂಸ್ಥಿತ್ತಂ ಮದೀಯಂ ಭುವಿ ದಿವಿ ಚ ಸದಾ ಸ್ಥಾಪಯನ್ಮಾಂ**
**ವೃಣೋತಿ ॥**

ತಾ॥ ಪರಿಪೂರ್ಣವಾದ ಜ್ಞಾನಜ್ಯೋತಿಸ್ಸುಳ್ಳವನಾಗಿ ಹತ್ತುದಿಕ್ಕುಗಳಲ್ಲಿಯೂ ವ್ಯಾಪಿಸಿ ಅಪರಿಚ್ಛಿನ್ನಸ್ವರೂಪನಾಗಿ ಸಕಲಚೇತನಾಚೇತನಾನ್ತರಾತ್ಮನಾಗಿ ನನ್ನಲ್ಲಿ ಅತ್ಯನ್ತವಾತ್ಸಲ್ಯವುಳ್ಳ ಭಗವನ್ತನು ನನ್ನ ಪುಣ್ಯಪಾಪರೂಪವಾದ ದ್ವಿವಿಧ ಕರ್ಮಗಳನ್ನೂ ನಿರ್ಮೂಲಮಾಡಿ ಅಜ್ಞಾನಮೂಲಕವಾದ ವಿಷಯಸಂಗವನ್ನು ನಾಶಪಡಿಸಿ ನನ್ನ ಮನಸ್ಸನ್ನು ತನ್ನಲ್ಲಿಯೇ ನಿಲ್ಲುವಂತೆ ಮಾಡಿ ನನ್ನನ್ನು ಪರಿಷ್ಕರಿಸಿ ಪರಮಪದದಲ್ಲಿಯೂ ತನಗೆ ಭೋಗ್ಯನಾಗುವಂತೆ ನನಗೆ ವೈಲಕ್ಷಣ್ಯವನ್ನುಂಟುಮಾಡುವನು.

(೧೧) ಮಾಲೇಮಾಯಪ್ಪೆರುಮಾನೇ ಮಾಮಾಯನೇ ಯೆನ್ಱೆನ್ಱು
ಮಾಲೇ ಯೇಱಿ ಮಾಲರುಳಾಲ್ಮನ್ನುಕುರುಕೂರ್
ಚ್ಚಡಕೋಪನ್,
ಪಾಲೇಯ್‌ತಮಿೞರಿಶೈಕಾರರ್‌ಪತ್ತರ್‌ಪರವುಮಾಯಿರತ್ತಿನ್,
ಪಾಲೇ ಪಟ್ಟ ಇವೈಪತ್ತುಮ್‌ವಲ್ಲಾರ್ಕ್ಕಿಲ್ಲೈ ಪರಿವದೇ.

ಪ್ರ॥ ಮಾಲೇ–ಪರಾತ್ಪರನಾದ ಸ್ವಾಮಿಯೇ, ಮಾಯಪ್ಪೆರುಮಾನೇ–ಆಶ್ಚರ್ಯಭೂತನಾದ ಭಗವನ್ತನೇ, ಮಾಮಾಯನೇ–ಅಪರಿಚ್ಛಿನ್ನವಾದ ಗುಣಚೇಷ್ಟಿತಾದಿಗಳುಳ್ಳವನೇ, ಎನ್ಱೆನ್ಱು–ಎನ್ದು ಹೇಳಿ, ಮಾಲೇ ಏಱಿ–(ಸರ್ವೇಶ್ವರನನ್ನು ನಾವು ಹೇಗೆ ಹೊಂದುವೆವು ಎಂದು) ಭ್ರಮಿಸಿ. (ಅನನ್ತರ) ಮಾಲ್ ಅರುಳಾಲ್–ಸರ್ವೇಶ್ವರನ ಕೃಪೆಯಿಂದ, ಮನ್ನು–ಅವನೊಡನೆ ಸೇರಿದ, ಕುರುಕೂರ್ ಶಡಕೋಪನ್–ಕುರುಕಾ

ಪುರೀಶ್ವರರಾದ ನಮ್ಮಾಳ್ವಾರ್ರ, ಪಾಲ್ ಏಯ್–ಹಾಲಿನಂತೆ ಭೋಗ್ಯವಾದ, ತಮಿಳ್ಳರ್–ದ್ರವಿಡಭಾಷಾಪಣ್ಡಿತರೂ, ಇಶೈಕಾರರ್–ಗಾನರಸಿಕರೂ, ಪತ್ತರ್–(ಅರ್ಥಜ್ಞಾನವುಳ್ಳ ಅನುಷ್ಠಾನಪರರಾದ) ಭಕ್ತರೂ, ಪರವುಮ್ – ಆದರಿಸುವಂತಹ (ಸ್ತೋತ್ರಮಾಡುವಂತಹ), ಆಯಿರತ್ತಿನ್ಪಾಲೇ – ಸಹಸ್ರಪದ್ಯಾತ್ಮಕ ಪ್ರಬನ್ಧದೊಳಗೆ, ಪಟ್ಟ–(ಮುತ್ತಿನಂತೆ ಸಿಕ್ಕಿದ) ಅನ್ತರ್ಭೂತವಾದ, ಇವೈಪತ್ತುಮ್– ಈ ದಶಕವನ್ನು, ವಲ್ಲಾರ್ ಕ್ಕು–ಭಾವಯುಕ್ತರಾಗಿ ಅಭ್ಯಾಸಮಾಡಿ ಪಠನಮಾಡುವವರಿಗೆ, ಪಿರಿವದು–(ಭಗವನ್ತನ ವಿಶ್ಲೇಷದಿಂದ ಉಂಟಾಗುವ) ದುಃಖವು, ಇಲ್ಲೈ–ಇಲ್ಲ.

( ಸ–ಗಾ–ರ ॥ )––

**ಸರ್ವೋತ್ಕೃಷ್ಟೋಽಸಿ ಮಾಯಿನ್ ! ಪರಮಪುರುಷ ! ಹೇ ಮಾಧವೇತ್ಯೇವ ಮುಗ್ಧ**
**ಸ್ತಸ್ಯೇಶಸ್ಯ ಪ್ರಸಾದಾದವಹಿತಹೃದಯಶ್ಶ್ರೀಶಠಾರಿರ್ಮಹಾತ್ಮಾ ।**
**ಸಾಹಸ್ರಂ ಚಾಹ ಶಸ್ಯಂ ದ್ರವಿಡಬುಧವರೈರ್ಗಾನಲೋಲೈಶ್ಚ ಭಕ್ತೈ**
**ಸ್ತತ್ರೇದಂ ರತ್ನರೂಪಂ ದಶಕಮಪಿ ಏರ್ದಾ ವೀತದುಃಖಸ್ಸುಖೀ ಸ್ಯಾತ್ ॥**

ತಾ॥ ಸರ್ವೋತ್ಕೃಷ್ಟನೇ ! ಆಶ್ಚರ್ಯಭೂತನೇ! ಅಪರಿಮಿತಗುಣಚೇಷ್ಟಿತ ವಿಶಿಷ್ಟನೇ! ಎಂದು ಮೊರೆಯಿಡುತ್ತ, ಅತ್ಯನ್ತ ಮೋಹಾವಿಷ್ಟರಾಗಿದ್ದು ಅನನ್ತರ ಭಗವನ್ತನ ಕೃಪೆಯಿಂದ ಅವನೊಡನೆ ಸಙ್ಗಮವಂಪಡೆದ ನಮ್ಮಾಳ್ವಾರ್ರ ಅತ್ಯನ್ತ ಭೋಗ್ಯವಾದ ಸರ್ವಶ್ಲಾಘ್ಯವಾದ ಸಹಸ್ರಗಾಥಾತ್ಮಕ ಪ್ರಬನ್ಧದೊಳಗೆ ರತ್ನದಂತೆ ಪ್ರಕಾಶಿಸುವ ಈ ದಶಕನನ್ನು ಅಭ್ಯಾಸಮಾಡುವವರಿಗೆ ದುಃಖ ಲೇಶವೂ ಇರುವುದಿಲ್ಲ––ಅವರೆಲ್ಲರೂ ನಿರತಿಶಯಸುಖವನ್ನು ಪಡೆಯುವರು––ಎಂದು ಭಾವವು.

---

( ದ್ರ–ಉ–ಸಂ. )

ಸ್ವಾಲಿಂಗನಾದಿಚಪಲೇ ಪುರುಷೋತ್ತಮೇಽಪಿ ಸ್ವಾಯೋಗ್ಯತಾಮಭಿವದಧ್ವಿಮುಖತ್ವಶಾರಿಃ । ತ್ರೈವಿಕ್ರಮಾದಿಚರಿತಂ ಪ್ರತಿಬೋಧ್ಯ ತೇನ ನೀತಸ್ಸ್ವಶೀಲವಶತಾಮಥ ಪಜ್ಞಮೇಽಭೂತ್ ॥

( ದ್ರ–ಉ–ತಾ–ರ )

**ಕ್ಷುದ್ರಾಬ್ರಹ್ಮಾನಾಭಿಮುಖ್ಯಾನ್ನಿಜಮಹಿಮತಿರಸ್ಕಾರಕಾರ್ಚಾಪ್ರಿಯತ್ವಾತ್**
**ಸರ್ವತ್ರಾಪ್ಯೈಕ್ಯಂ ಪ್ರದಾನಾತ್ಸ್ವವಿಧತಯನತಸ್ವಾಸ್ತ್ವಂ ಪ್ರಸಕ್ತ್ಯೈಕರಸ್ಯಾತ್।**
**ಗೋಪಾದ್ಯಾಪ್ತ್ಯೇಶೇಷೇಕ್ಷಣವಿಷಯತಯಾ ಭಕ್ತವಸ್ತುಪ್ರಸಕ್ತೇಃ**
**ಶ್ಲಿಷ್ಯನ್ನಾಶವ್ಯಪೋಹಾತ್ತದಹಿತಶಮನಾತ್ಪ್ರಾಹ ನಾಥಂ ಸಶೀಲಮ್ ॥**

(ಪಂಚಮದಶಕದ ಸಾರಾಂಶ)

ಈ ಐದನೆಯ ದಶಕದಲ್ಲಿ—ಭಗವನ್ತನು ನಾಯಿಕಾಸ್ವರೂಪವನ್ನು ಹೊಂದಿ ವಿಶೇಷ ಸನ್ತಪ್ತರಾಗಿರುವ ಶಠಾರಿಯನ್ನು ಆಲಿಂಗನಾದಿಗಳಿಂದ ಸನ್ತೋಷಪಡಿಸಲು ಉದ್ಯುಕ್ತನಾದಾಗ, ನಾನು ಅಯೋಗ್ಯೆಯೆಂದು ಹಿಂಜರಿದು ವೈಮುಖ್ಯದಿಂದ ದೂರ ಹೋಗುತ್ತಿರುವ ಈ ನಾಯಕಿಯನ್ನು ತನ್ನ ತ್ರಿವಿಕ್ರಮಾವತಾರಾದಿ ದಿವ್ಯಚೇಷ್ಟಿತ ಗಳನ್ನು ಬೋಧಿಸಿ ತನ್ನ ಸೌಶೀಲ್ಯದಿಂದ ತನಗೆ ವಶಮಾಡಿಕೊಂಡನೆಂದು— ಹೇಳಲ್ಪಟ್ಟಿದೆ.

---

ಶ್ರೀಃ

# ಪ್ರಥಮಶತಕದಲ್ಲಿ—ಷಷ್ಠದಶಕವು.

## (ಪರಿವದಿಲೀಶನೈಪ್ಪಾಡಿ)

(ಈ ದಶಕದಲ್ಲಿ—ಈಶ್ವರನನ್ನು ಚೇತನರೆಲ್ಲರೂ ಸುಲಭವಾಗಿ ಆರಾಧಿಸಿ ಉಜ್ಜೀವಿಸ ಬಹುದೆಂದು—ನಿರೂಪಿಸಲ್ಪಡುತ್ತದೆ)

---

(೧) ಪರಿವದಿಲೀಶನೈ ಪ್ಪಾಡಿ,
ವಿರಿವದು ಮೇವಲುಱುವೀರ್,
ಪಿರಿವಕೈಯಿನ್ರಿ ನನ್ನೀರ್ ತೂಯ್,
ಪುರಿವದುವುಮ್ ಪುಕೈಪೂವೇ.

ಪ್ರ|| ಪರಿವದು ಇಲ್-ದುಃಖವು ಇಲ್ಲದಂತೆಮಾಡುವ, ಈಶನೈ—ಸರ್ವೇಶ್ವರ ನನ್ನು, ಪಾಡಿ-ಸ್ತೋತ್ರದಿಂದ ಗಾನಮಾಡಿ, ವಿರಿವದು—ಆನನ್ದಬಾಷ್ಪಾದಿ ಸೂಚಿತ ವಾದ ಸ್ವರೂಪಜ್ಞಾನವಿಕಾಸವನ್ನು, ಮೇವಲ್—ಹೊಂದುವುದರಲ್ಲಿ, ಉಱುವೀರ್— ಆಸಕ್ತಿಯುಳ್ಳವರೇ, ಪಿರಿವಕೈ – ಪ್ರಯೋಜನಾನ್ತರಪರರಾಗಿ (ವೈಮುಖ್ಯದಿಂದ) ಬಿಟ್ಟುಹೋಗೋಣವು, ಇನ್ರಿ- ಇಲ್ಲದಂತೆ, ನಲ್‌ನೀರ್—ಪರಿಶುದ್ಧವಾದ ತೀರ್ಥ ವನ್ನು, ತೂಯ್—ಚೆಲ್ಲಿ, (ಸಮರ್ಪಿಸಿ), ಪುರಿವದುವುಮ್-(ಅದರಮೇಲೆ) ಸಮರ್ಪಿ ಸಲ್ಪಡತಕ್ಕುದು, ಪುಕೈಪೂವೇ—ಧೂಪವೂ ಪುಷ್ಪವೂ ಮಾತ್ರವೇ.

( ಸ-ಗಾ-ರ || )—

ಸಂಕೀರ್ತ್ಯ ಪೂರ್ಣವಿಭವಂ ನಿರವದ್ಯವಿಕಾಶಂ
ಜ್ಞಾನಾದಿಪೂರ್ತಿಮಪಿ ಚೇತ್ಸರಿಲಬ್ಧಕಾಮಾಃ |
ಯೂಯಂ ತ್ವನನ್ಯಶರಣಾ ಭಜತಾದ್ಯ ನಾಥಂ
ಧೂಪಂ ಚ ಪುಷ್ಪಮಪಿ ತತ್ರ ಸಮರ್ಪ್ಯ ತೀರ್ಥೈಃ ||

ತಾ|| ಚೇತನರ ದುಃಖವನ್ನೆಲ್ಲಾ ಸಂಹರಿಸುವಂತಹ ಸರ್ವೇಶ್ವರನನ್ನು ಗಾನ ರೂಪವಾಗಿ ಸಂಕೀರ್ತನಮಾಡಿ, ಸ್ವರೂಪಜ್ಞಾನವಿಕಾಸವಂ ಪಡೆಯಲು ಆಸಕ್ತಿಯುಳ್ಳವರೇ! ನೀವುಗಳು ಪ್ರಯೋಜನಾನ್ತರಪರರಾಗಿ ಅನ್ಯತ್ರ ಹೋಗದೆ ಭಗವನ್ತನನ್ನೇ ಆರಾಧಿಸಲುದ್ಯುಕ್ತರಾಗಿ, (ಅರ್ಘ್ಯಪಾದ್ಯಾದಿಗಳಿಗಾಗಿ) ತೀರ್ಥವನ್ನು ಸಮರ್ಪಿಸಿ ಅನನ್ತರ ಧೂಪವನ್ನೂ ಪುಷ್ಪವನ್ನೂ ಸಮರ್ಪಿಸಿದರೆ—ನಿಮ್ಮ ಉಜ್ಜೀವನಕ್ಕೆ ಇಷ್ಟೇಸಾಕಾಗಿದೆಯೆಂದು ತಾತ್ಪರ್ಯ. (ಶ್ರೀ ಭಗವನ್ತನ ಆರಾಧನವು ಕಷ್ಟಸಾಧ್ಯವೆಂದು ಭ್ರಾನ್ತರಾಗದೆ ನೀವು ಇಷ್ಟುಮಟ್ಟಿಗೆ ಮಾಡಿದರೂ ಅವನು ಸನ್ತುಷ್ಟನಾಗುವನೆಂದು ಭಾವವು.)

(೨) ಮದುವಾರ್ ತಣ್ಣನ್ದುೞಾಯಾನ್,
ಮುದುವೇದ ಮುದಲ್ವನುಕ್ಕು,
ಎದುವೇದೆನ್ ಪಣಿ ಯೆನ್ನಾದು
ಅದುವೇ ಯಾಳ್ಶೆಯ್ಯುಮೀಡೇ.

ಪ್ರ|| ಅಮ್—ರಮಣೀಯವಾದ, ಮದು ಆರ್—ಮಧುಸಂಪೂರ್ಣವಾದ, ತಣ್ ತುೞಾಯಾನ್—ಶೀತಲವಾದ ತುಲಸೀಮಾಲೆಯನ್ನು ಧರಿಸಿರುವವನಾಗಿ, ಮುದುವೇದ—ಪ್ರಾಚೀನತಮವಾದ ವೇದಗಳಿಂದ ಸಂಕೀರ್ತಿತನಾಗಿರುವ, ಮುದಲ್ವನುಕ್ಕು—ಜಗತ್ಕಾರಣಭೂತನಾದ ಭಗವನ್ತನಿಗೆ, ಎದು ಏದು-ಯಾವುದು ಯಾವುದು, ಎನ್ ಪಣಿ—ನಾನು ಮಾಡಬೇಕಾದ ಕೈಂಕರ್ಯವು, ಎನ್ನಾದು—ಎನ್ನದೆ, ಅದುವೇ—ಸರ್ವವಿಧ ಕೈಂಕರ್ಯದಲ್ಲಿ ಉಂಟಾದ ಆ ಪ್ರೀತಿಯೇ, ಆಳ್ ಶೆಯ್ಯುಮ್—ಕೈಂಕರ್ಯವನ್ನು ಮಾಡಲು, ಈಡು—(ಅಧಿಕಾರಸಮ್ಪತ್ತಿಯನ್ನುಂಟುಮಾಡಲು) ತಕ್ಕದು.

( ಸ–ಗಾ–ರ ॥ )—

ಸುಸ್ವಾದುಗನ್ಧತುಲಸೀಧರಮಪ್ರಮೇಯಂ
ವೇದೈಶ್ಚ ವೇದ್ಯಮನಘಂ ಪುರುಷಂ ಪುರಾಣಮ್ ।
ಆರಾಧಯಾಮಿ ಕಥಮಿತ್ಯಪಿ ಮಾಽಭೂತ್ ಚಿನ್ತಾ !
ಸರ್ವಂ ಕರೋಮ್ಯಹಮಿತೀಶ ಹಿ ದಾಸ್ಯಕೃತ್ಯಮ್ ॥

ತಾ॥ ದಿವ್ಯತುಲಸೀಮಾಲಾಧರನಾಗಿ ವೇದಪ್ರತಿಪಾದ್ಯನಾಗಿರುವ ಪುರಾಣ ಪುರುಷನಿಗೆ ನಾವು ಯಾವ ಯಾವ ಕೈಂಕರ್ಯವನ್ನು ಮಾಡಬಲ್ಲೆವೆಂದು ಚಿನ್ತಿಸಿ ಭೀತರಾಗದೆ ಸರ್ವವಿಧಕೈಂಕರ್ಯವನ್ನೂ ನಾವು ಮಾಡುವೆವೆಂದು ಕೈಂಕರ್ಯದಲ್ಲಿ ಆದರಾತಿಶಯವನ್ನು ತೋರಿಸೋಣವೇ ನಿನಗೆ ಕೈಂಕರ್ಯದಲ್ಲಿ ಅಧಿಕಾರಸಮ್ಪತ್ತಿ ಯನ್ನುಂಟುಮಾಡುವುದೆಂದು ತಾತ್ಪರ್ಯ.

(೩) ಈಡು ಮೆಡುಪ್ಪುಮಿಲೀಶನ್,
ಮಾಡು ವಿಡಾದೆನ್ಮನನೇ,
ಪಾಡುಮೆನ್ನಾ ಅವನ್ ಪಾಡಲ್,
ಆಡುಮೆನಙ್ಗು ಮಣಙ್ಗೇ.

ಪ್ರ॥ ಈಡುಮ್–(ದೋಷಗಳನ್ನು ನೋಡಿ) ತ್ಯಜಿಸೋಣವೂ, ಎಡುಪ್ಪುಮ್–(ಗುಣಗಳನ್ನು ನೋಡಿ) ಸ್ವೀಕರಿಸೋಣವೂ, ಇಲ್–ಇಲ್ಲದ, ಈಶನ್–ಸರ್ವೇಶ್ವರನ, ಮಾಡು–ಸಮೀಪವನ್ನು, ಎನ್ ಮನನ್–ನನ್ನ ಮನಸ್ಸು, ವಿಡಾದು–ಬಿಡುವುದಿಲ್ಲ. ಎನ್ ನಾ–ನನ್ನ ನಾಲಿಗೆಯು, ಅವನ್–ಆ ಸರ್ವೇಶ್ವರನ ವಿಷಯವಾದ, ಪಾಡಲ್–ಸಂಕೀರ್ತನಗಳನ್ನು, ಪಾಡುಮ್ – ಹಾಡುತ್ತಿರುವುದು, ಎನ್ ಅಙ್ಗಮ್–ನನ್ನ ಶರೀರವು, ಅಣಙ್ಗು–ಆವೇಶಬಂದಂತೆ, ಆಡುಮ್–ಆಡುತ್ತಿರುವುದು.

( ಸ–ಗಾ–ರ ॥ )—

ತ್ಯಾಗೇ ಪರಿಗ್ರಹವಿಧೌ ಚ ನೃಣಾಂ ಸಮಾನಂ
ನೈವ ತ್ಯಜೇನ್ಮಮ ಮನಃ ಕಿಲ ತಂ ಪ್ರಭುಂ ಮೇ ।
ಗಾನಂ ನ ಹಿ ತ್ಯಜತಿ ಮೇ ರಸನಾ ಚ ತಸ್ಯ
ಪ್ರೇಮ್ಣಾ ಮುಮಾದ್ಯ ಕಿಲ ನೃತ್ಯತಿ ದೇಹಯಷ್ಟಿಃ ॥

ತಾ॥ ಚೇತನರ ಗುಣದೋಷಗಳನ್ನು ನೋಡದೆ ಭಕ್ತರನ್ನೆಲ್ಲಾ ಅಂಗೀಕರಿಸುವ ಸ್ವಭಾವವುಳ್ಳ ಸರ್ವೇಶ್ವರನನ್ನು ನನ್ನ ಮನಸ್ಸು ಬಿಡಲಾರದೆ ಆಶ್ರಯಿಸಿರು

ವುದು; ನನ್ನ ನಾಲಿಗೆಯು ಸಂಕೀರ್ತನಮಾಡುತ್ತಿರುವುದು; ನನ್ನ ದೇಹವು ಆವೇಶ ಬಂದಂತೆ ನರ್ತನಮಾಡಿ ಆಡುತ್ತಿರುವುದು—ಈಪ್ರಕಾರ ನನ್ನ ಕರಣತ್ರಯವೂ ಅವನ ವಿಷಯದಲ್ಲಿಯೇ (ಅತ್ಯನ್ತ ಪ್ರೇಮಪರವಶವಾಗಿ) ನಿತ್ಯಸಕ್ತವಾಗಿರುವುದು.

(೪) ಅಣಙ್ಗೆನ ವಾಡುಮೆನಙ್ಗವ್,
ವಣಙ್ಗಿ ವೞಿಪಡು ಮೀಶರ್,
ಪಿಣಙ್ಗಿ ಯಮರರ್ ಪಿದಱ್ಱುವ್,
ಕುಣಙ್ಗೆ ಕೊೞ್ ಕೊಳ್ಕೈಯಿನಾನೇ.

ಪ್ರ|| ಅಣಙ್ಗು ಎನ-ದೈವಾವಿಷ್ಟನಾದಂತೆ, ಆಡುಮ್ -(ಅತ್ಯನ್ತ ಪ್ರೀತಿಯಿಂದ) ನರ್ತನಮಾಡುತ್ತಿರುವ, ಎನ-ನನ್ನ, ಅಙ್ಗಮ್-ಶರೀರವು, ವಣಙ್ಗಿ ವೞಿಪಡುಮ್-ಸೇವಿಸಿ ಆರಾಧಿಸುತ್ತಿರುವ, ಈಶರ್-ಸರ್ವೇಶ್ವರನು, ಅಮರರ್-ನಿತ್ಯಸೂರಿಗಳು, ಪಿಣಙ್ಗಿ-(ಒಬ್ಬರಿಗೊಬ್ಬರು ಸ್ಪರ್ಧೆಯಿಂದ ಗುಣತಾರತಮ್ಯ ವಿಷಯದಲ್ಲಿ) ಕಲಹಮಾಡಿ, ಪಿದಱ್ಱುಮ್-ವಾದ ಕೋಲಾಹಲಗಳನ್ನು ಮಾಡುತ್ತಿರುವಂತಹ, ಕುಣಮ್ ಕೊೞ್-ಗುಣಗಳ ಸಾಂಗತ್ಯಕ್ಕೆ, ಕೊಳ್ಕೈಯಿನಾ-ನಿತಾಶ್ರಯವಾಗಿರುವನು.

( ಸ-ಗಾ-ರ || )—

ಆವಿಷ್ಟವತ್ಕಿಲ ವಪುರ್ಮಮ ನೃತ್ಯತೀದಂ
ಸಮ್ಯಕ್ಪ್ರಣಮ್ಯ ಮಮ ನಾಥಮಯಂ ಹಿ ದೇವೈಃ |
ಸ್ಪರ್ಧ್ಯೋಽಸ್ತಿ ಸೂರಿತಿಲಕೈರಪಿ ಸಮ್ಭ್ರಮೇಣ!
ಶ್ರೀಶಸ್ಯ ಸದ್ಗುಣಗಣಾವಳಿರೀದೃಶೀ ಹಿ ||

ತಾ|| ನನ್ನ ಶರೀರವು ದೈವಾವೇಶಬಂದಂತೆ ಶ್ರೀ ಭಗವನ್ತನಲ್ಲಿರುವ ಉತ್ಕಟ ಪ್ರೀತಿಯಿಂದ ಪ್ರಣಾಮಾದಿಗಳಿಂದ ನರ್ತನಮಾಡುತ್ತಿರುವುದು. ಇಂತಹ ಸರ್ವೇಶ್ವರನ ಕಲ್ಯಾಣಗುಣಗಳ ವಿಷಯದಲ್ಲಿ ದೇವತೆಗಳೂ ನಿತ್ಯಸೂರಿಗಳೂ ಸಹ ಆಯಾ ಗುಣಗಳ ತಾರತಮ್ಯವನ್ನು ಕುರಿತು — ನಾನಾವಿಧವಾದ ವಾದಕೋಲಾಹಲಗಳನ್ನು ಅದ್ಯಾಪಿ ಮಾಡುತ್ತಿರುವರು. ಅನ್ತಹ ಅನನ್ತವಾದ ಕಲ್ಯಾಣಗುಣಗಳಿಗೆಲ್ಲಾ ನಮ್ಮ ಸ್ವಾಮಿಯೇ ನಿಧಿಯಾಗಿರುವವನು.

(೫) ಕೊಳ್ಕೈ ಕೊಳಾವೈ ಯಿಲಾದಾನ್,
ಎಳ್ಕಲಿರಾಗಮಿಲಾದಾನ್,
ವಿಳ್ಕೈ ವಿಳ್ಳಾವೈ ವಿರುಮ್ಬಿ,
ಉಳ್ಕಲನ್ದಾರ್ಕೋರಮುದೇ.

ಪ್ರ॥ ಕೊಳ್ಕೈ-(ಗುಣಗಳನ್ನು ನೋಡಿ) ಸ್ವೀಕರಿಸೋಣವೂ, ಕೊಳಾವೈ-(ದೋಷಗಳನ್ನು ನೋಡಿ) ತಿರಸ್ಕರಿಸೋಣವೂ, ಇಲಾದಾನ್-ಇಲ್ಲದವನಾಗಿ, ಎಳ್ಕಲ್-ದ್ವೇಷವೂ, ಇರಾಗಮ್-ಪ್ರೀತಿಯೂ, ಇಲಾದಾನ್-ಇಲ್ಲದವನಾಗಿ, (ಸರ್ವೇಶ್ವರನು) ವಿಳ್ಕೈ-(ಪ್ರಯೋಜನಾನ್ತರಪರರಾಗಿ) ತನ್ನನ್ನು ಬಿಟ್ಟುಹೋಗೋಣವನ್ನೂ, ವಿಳ್ಳಾವೈ-ಬಿಡದೆ ಇರೋಣವನ್ನೂ, ವಿರುಮ್ಬಿ-ಚೆನ್ನಾಗಿ ಪರಿಶೀಲಿಸಿ, ಉಳ್ಕಲನ್ದಾರ್ಕ್ಕು-ತನ್ನಲ್ಲಿ ಅನ್ತರಙ್ಗಸಕ್ತರಾದವರಿಗೆ ಓರ್-ಅದ್ವಿತೀಯವಾದ, ಅಮುದು-ಅಮೃತಸ್ವರೂಪನಾಗಿರುವವನು.

( ಸ-ಗಾ. ರ॥ )—

**ಸ್ವೀಕಾರಧಿಕ್ಕೃತಿವಿಹೀನಮರಾಗವೈರಂ**
**ಸುಸ್ವಾದು ಚೇದಮಮೃತಂ ಕಿಲ ನಿತ್ಯಭೋಗ್ಯಮ್।**
**ವಸ್ತು ಪ್ರಯೋಜನಪರಾನಪಿ ಚಾಪ್ಯನನ್ಯಾನ್**
**ಸಮ್ಯಗ್ವಿವಿಚ್ಯ ಸುಲಭಂ ಪರಭಕ್ತಿಭಾಜಾಮ್ ॥**

ತಾ॥ ಭಕ್ತರ ವಿಷಯದಲ್ಲಿ ಸ್ವೀಕಾರತಿರಸ್ಕಾರಗಳೂ, ರಾಗದ್ವೇಷಗಳೂ ಇಲ್ಲದೆ ಇರುವ ಸರ್ವೇಶ್ವರನು ಪ್ರಯೋಜನಾನ್ತರಪರರಿಗೆ ಆಯಾ ಪ್ರಯೋಜನಗಳನ್ನು ಕೊಟ್ಟು ಅವರು ದೂರಹೋಗುವಂತೆ ಕಳುಹಿಸಿಬಿಡುವವನಾಗಿಯೂ, ತನ್ನಲ್ಲಿಯೇ ಅನ್ತರಙ್ಗಸಕ್ತರಾದವರನ್ನು ಬಿಡದೆ ರಕ್ಷಿಸಿ ಅವರಿಗೆ ತಾನು ಅದ್ವಿತೀಯವಾದ ಅಮೃತಸ್ವರೂಪನಾಗಿ ನಿತ್ಯಭೋಗ್ಯನಾಗಿಯೂ ಇರುವನು.

(೬) ಅಮುದ ಮಮರರ್ಕಳ್ಕೀನ್ದ,
ನಿಮಿರ್ ಶುಡರಾಳಿ ನೆಡುಮಾಲ್,
ಅಮುದಿಲುಮಾತ್ತಿನಿಯನ್,
ನಿಮಿರ್ತಿರೈ ನೀಳ್-ಕಡಲಾನೇ.

ಪ್ರ॥ ಅಮರರ್ಕಳ್ಕು–ದೇವತೆಗಳಿಗೆ, ಅಮುದಮ್–ಅಮೃತವನ್ನು, ಈನ್ದ–ತನ್ದುಕೊಟ್ಟವನಾಗಿಯೂ, ನಿಮಿರ್–ಪ್ರವರ್ಧಮಾನವಾದ, ಶುಡರ್–ತೇಜಸ್ಸುಳ್ಳ, ಆಳ್ಳಿ–ಚಕ್ರವನ್ನು ಧರಿಸಿರುವವನಾಗಿಯೂ, ನೆಡುಮಾಲ್–ಅಪರಿಮಿತ ಮಹಿಮೆಯುಳ್ಳವನಾಗಿಯೂ (ಇರುವ), ನಿಮಿರ್ ತಿರೈ–ಉಜ್ಜೃಂಭಿಸುತ್ತಿರುವ ಅಲೆಗಳುಳ್ಳ, ನೀಳ್ಕಡಲಾನ್–ವಿಶಾಲವಾದ ಕ್ಷೀರಸಮುದ್ರದಲ್ಲಿ ನಿದ್ರಿಸುತ್ತಿರುವ ಭಗವನ್ತನು, ಅಮುದಿಲುಮ್–(ಅಲ್ಲಿ ಉಂಟಾದ) ಅಮೃತಕ್ಕಿಂತಲೂ, ಆಱ್ಱ ಇನಿಯನ್–ಅತ್ಯನ್ತ ಮಧುರವಾಗಿ ಭೋಗ್ಯನಾಗಿರುವವನು.

( ಸ–ಗಾ–ರ ॥ )—

> **ಯಶ್ಚಾಮೃತಂ ತು ವಿತರನ್ನಮರಾನ್ ಪ್ರತುಷ್ಟ್ಯಾತ್**
> **ಶುರ್ವನ್ಮಹೋಜ್ಜ್ವಲ ಸುದರ್ಶನಭೃತ್ಪರಾತ್ಮಾ ।**
> **ಕಲ್ಲೋಲವೈಭವವಿಶಾಲಸುಧಾಬ್ಧಿಶಾಯೀ**
> **ತತ್ರಾಮೃತಾಚ್ಚ ಮಧುರಾನ್ನಿತರಾಂ ಹಿ ಭೋಗ್ಯಃ ॥**

ತಾ॥ (ಅನ್ತಹ ಭೋಗ್ಯತಮನಾದ ಭಗವನ್ತನನ್ನು ಬಿಟ್ಟು ಅಮೃತವನ್ನು ಪಾನಮಾಡಲು ಅಪೇಕ್ಷಿಸಿದ ಪ್ರಯೋಜನಾನ್ತರಪರರಾದ ದೇವತೆಗಳನ್ನು ಗರ್ಹಣ ಮಾಡುತ್ತಾರೆ.) ದೇವತೆಗಳಿಗೆ ಅಮೃತವನ್ನು ತಂದುಕೊಟ್ಟವನಾಗಿಯೂ, ಚಕ್ರಪಾಣಿಯಾಗಿಯೂ, ಅಪಾರಮಹಿಮೆಯುಳ್ಳವನಾಗಿಯೂ—ಇರುವ ಕ್ಷೀರಾರ್ಣವಶಾಯಿಯಾದ ಸರ್ವೇಶ್ವರನು ಆ ಅಮೃತಕ್ಕಿಂತ ಅತ್ಯನ್ತ ಭೋಗ್ಯನಾಗಿರುವವನು.

(೭) ನೀಳ್ ಕಡಲ್ ಶೂಳ್ಳಿಲಙ್ಗೈ ಕೋನ್
ತೋಳ್ಕಳ್ ತಲೈ ತುಣಿಶೆಯ್ದಾನ್
ತಾಳ್ಕಳ್ ತಲೈಯಿಲ್ ವಣಙ್ಗಿ,
ನಾಳ್ಕಡಲೈ ಕ್ಕಳಿಮಿನೇ.

ಪ್ರ॥ ನೀಳ್ಕಡಲ್–ವಿಶಾಲವಾದ ಸಮುದ್ರದಿಂದ, ಶೂಳ್–ಪರಿವೃತವಾದ, ಇಲಙ್ಗೈ–ಲಂಕಾಪುರಿಗೆ, ಕೋನ್–ನಾಯಕನಾದ ರಾವಣನ, ತೋಳ್ಕಳ್–(೨೦) ಬಾಹುಗಳನ್ನೂ, ತಲೈ–(೧೦) ತಲೆಗಳನ್ನೂ, ತುಣಿಶೆಯ್ದಾನ್–ಛೇದಿಸಿ ತುಂಡು ತುಂಡು ಮಾಡಿದವನ (ಶ್ರೀರಾಮನ), ತಾಳ್ಕಳ್–ಪಾದಗಳನ್ನು ಕುರಿತು, ತಲೈಯಿಲ್ ವಣಙ್ಗಿ–ಶಿರಸ್ಸಿನಿಂದ ಪ್ರಣಾಮಮಾಡಿ, ನಾಳ್ಕಡಲೈ–ಕಾಲವೆಂಬ ಸಮುದ್ರವನ್ನು, ಕಳಿಮಿನ್–ದಾಟಿರಿ.

( ಸ–ಗಾ–ರ || )—

ಉತ್ತೀರ್ಣವಾರಿಧಿವೃತಾಂ ನಗರೀಂ ಚ ಲಂಕಾಂ
ಶಾಸ್ತುರ್ಭುಜಾನಪಿ ಶಿರಾಂಸಿ ಚ ಯಶ್ಚಕರ್ತ |
ತತ್ಪಾದಪದ್ಮಯುಗಳಂ ಶಿರಸಾ ಪ್ರಣಮ್ಯ
ಪ್ರೇಮ್ಣಾ ಸ್ವಯಂ ತರತ ಕಾಲಮಹಾಮ್ಬುರಾಶಿಮ್ ||

ತಾ || ( ನಿರತಿಶಯಭೋಗ್ಯನಾದ ಭಗವಂತನನ್ನು ಹೊಂದುವವರಿಗೂ ಹೇಗೆ ಕಾಲಕ್ಷೇಪವನ್ನು ಮಾಡಬೇಕೆಂದರೆ) ಲಂಕಾಪುರೀನಾಯಕನಾದ (ದುಷ್ಟ ರಾಕ್ಷಸನಾದ) ರಾವಣನ ಬಾಹುಶಿರಃ ಪರಮ್ಪರೆಗಳನ್ನೆಲ್ಲಾ ಛೇದಿಸಿ (ಸಾಧುಪರಿತ್ರಾಣವಂಮಾಡಿದ) ಶ್ರೀರಾಮನ ಪಾದಾರವಿನ್ದಗಳಲ್ಲಿ ಸಾಷ್ಟಾಂಗಪ್ರಣಾಮವಂ ಮಾಡುತ್ತ (ತದ್ಗುಣಕೀರ್ತನದಿಂದ) ಕಾಲಸಮುದ್ರವನ್ನು ದಾಟಿರಿ.

(೮) ಕೞಿಮಿನ್ ತೊಣ್ಡೀರ್ಗಾಳ್ ಕೞಿತ್ತು,
ತೊೞುಮಿನವನ್ನೈ ತೊೞುದಾಲ್
ವೞಿ ನಿನ್ಱ ವಲ್ವಿನೈ ಮಾಳ್ವಿತ್ತು,
ಅೞಿವಿನ್ಱಿ ಯಾಕ್ಕನ್ತರುಮೇ.

ಪ್ರ|| ತೊಣ್ಡೀರ್ಗಾಳ್ – ಚಪಲಚಿತ್ತರಾದ ನೀವುಗಳು, ಕೞಿಮಿನ್–ನಿಮ್ಮ ಚಾಪಲ್ಯವನ್ನು ಬಿಡಿರಿ, ಕೞಿತ್ತು–ಅದನ್ನು ಬಿಟ್ಟು, ಅವನ್ನೈ–ಆ ಶ್ರೀರಾಮನನ್ನೇ, ತೊೞುಮಿನ್–ಸೇವಿಸಿರಿ. ತೊೞುದಾಲ್–ಸೇವಿಸಿದರೆ (ಒಂದು ಅಂಜಲಿಮಾಡಿದರೂ), ವಲ್–ಪ್ರಬಲವಾದ (ಅನಾದಿಯಾದ), ವೞಿನಿನ್ಱ–(ಇಷ್ಟಸಿದ್ಧಿಗೆ ಪ್ರತಿಬನ್ಧಕವಾಗಿ) ಮಧ್ಯೇನಿಂತಿರುವ, ವಿನೈ–ಪುಣ್ಯ ಪಾಪಗಳನ್ನು, ಮಾಳ್ವಿತ್ತು–ನಾಶಪಡಿಸಿ, ಅೞಿವಿನ್ಱಿ–ಪುನರಾವೃತ್ತಿ ಇಲ್ಲದಂತೆ ನಿತ್ಯವಾಗಿರುವ, ಆಕ್ಕಮ್–ಮೋಕ್ಷಸಾಮ್ರಾಜ್ಯವನ್ನು, ತರುಮೇ– ಅವನು ನಿಮಗೆ) ಕೊಡುವನೆಂಬುದು ನಿಶ್ಚಯ.

( ಸ–ಗಾ–ರ || )—

ಭಕ್ತ್ಯಾ ಅನನ್ಯಶರಣಾ ಭವತಾದ್ಯ ಯೂಯಂ
ತ್ಯಕ್ತ್ವಾನ್ಯಶಕ್ತಿಮಮುಮೇವ ಹರಿಂ ಭಜಧ್ವಮ್ |
ತಸ್ಮಾದನಾದಿದುರಿತಾವಳಿವಿಘ್ನಮಾಲಾಂ
ಹತ್ವಾ ಸ ಏವ ತನುತೇ ಪರಮಾಂ ಗತಿಂ ವಃ ||

ತಾ|| ಚಪಲಚಿತ್ತರಾದ ಭಕ್ತರೇ ! ಇತರಾಶ್ರಯಣವೆಂಬ ನಿಮ್ಮ ಚಾಪಲ್ಯವನ್ನು ಬಿಟ್ಟು ಅವನನ್ನೇ ಭಜಿಸಿರಿ. ಒಂದು ಅಂಜಲಿಮಾಡಿದರೂ ಸಾಕು. ಆಗ ಅವನೇ ಪ್ರತಿಬನ್ಧಕರೂಪವಾದ ಮಹಾಪಾಪಗಳನ್ನೆಲ್ಲಾ ನಾಶಪಡಿಸಿ, ನಿಮಗೆ ಮೋಕ್ಷಸಾಮ್ರಾಜ್ಯವೆಂಬ ಮಹಾಪದವಿಯನ್ನು ಕೊಡುವುದು ಸಿದ್ಧ.

(೯) ತರುಮಮರುಮ್ ಪಯನಾಯ,
ತಿರುಮಕಳಾರ್ ತನಿಕ್ಕೇಳ್ವನ್,
ಪೆರುಮೈಯುಡೈಯ ಪಿರಾನಾರ್,
ಇರುಮೈ ವಿನೈ ಕಡಿವಾರೇ.

ಪ್ರ|| ತರುಮಮ್–ಧರ್ಮಗಳಿಗೂ, ಅರುಮ್–ದುರ್ಲಭವಾದ, ಪಯನಾಯ–ಪ್ರಯೋಜನವಾಗಿರುವ, ತಿರುಮಕಳಾರ್–ಶ್ರೀ ದೇವಿಗೆ, ತನಿಕ್ಕೇಳ್ವನ್–ಅಸ್ಸಾದೃಶನಾದ ನಾಯಕನಾಗಿರುವ, ಪೆರುಮೈಯುಡೈಯ-ಮಹಾಮಹಿಮೆಯುಳ್ಳ, ಪಿರಾನಾರ್-ಸರ್ವೇಶ್ವರನು, ಇರುಮೈ – (ಪುಣ್ಯಾಪಾಪರೂಪವಾಗಿ) ಎರಡುವಿಧವಾದ, ವಿನೈ–ಕರ್ಮವನ್ನು, ಕಡಿವಾರೇ–ನಾಶಪಡಿಸುವನಷ್ಟೇ.

( ಸ–ಗಾ–ರ || ) –

**ಯಶ್ಮಾದ್ವಿತೀಯವಿಭವಃ ಪ್ರಭುರಪ್ರಮೇಯೋ**
**ವಿಷ್ಣುಶ್ಶ್ರಿಯಃಪತಿರುದಾರಫಲಪ್ರದೋಽಸ್ತಿ|**
**ಸತ್ಯಂ ಸಮಸ್ತದುರಿತಾನಿ ಚ ಯುಗ್ಮರೂಪಾ–**
**ಣ್ಯುಚ್ಛೇದಯೇತ್ಸ್ವಯಮಯಂ ಪ್ರತಿಬನ್ಧಕಾನಿ ||**

ತಾ|| ( "ದೇವ್ಯಾ ಕಾರುಣ್ಯರೂಪಯಾ" – "ನಕಶ್ಚಿನ್ನಾಪರಾಧ್ಯತಿ"—ಎಂದು ಪ್ರಮಾಣಸಿದ್ಧವಾದ ಕಾರುಣ್ಯಮೂರ್ತಿಯಾಗಿಯೂ, ಸಕಲಲೋಕಜನನಿಯಾಗಿಯೂ ಇರುವ ಲಕ್ಷ್ಮೀದೇವಿಯ ಸಾನ್ನಿಧ್ಯವಿರುವುದರಿಂದ ನಿಮಗೆ ಯಾವ ಭೀತಿಯೂ ಇಲ್ಲ. ನಿಮಗೆ ಕರ್ಮಧ್ವಂಸ ಪೂರ್ವಕವಾದ ಫಲಸಿದ್ಧಿಯು ನಿಶ್ಚಿತವೆಂದು ಹೇಳುತ್ತಾರೆ). ಸಕಲ ಧರ್ಮಗಳ ಅನುಷ್ಠಾನದಿಂದಲೂ ಹೊಂದಲಶಕ್ಯವಾದ ಶ್ರೀದೇವೀಸಾನ್ನಿಧ್ಯದಲ್ಲಿ ಆ ಶ್ರೀದೇವಿಯ ಪುರುಷಕಾರ ಬಲದಿಂದ ನಿಮ್ಮ ಪುಣ್ಯಾಪಾಪರೂಪಕರ್ಮಗಳನ್ನೆಲ್ಲಾ (ಅವಳ ಮಾತಿನಂತೆ ಸಕಲ ಕಾರ್ಯಗಳನ್ನೂ ನಡೆಸುವ) ಸರ್ವೇಶ್ವರನು ತಾನೇ ಧ್ವಂಸಮಾಡಿ ಫಲಪ್ರದನಾಗುವನಷ್ಟೇ. (ಇದರಲ್ಲಿ ಯಾವಸಂದೇಹವೂ ಇಲ್ಲವೆಂಬ ಭಾವವು).

(೧೦) ಕಡಿವಾರ್ ತೀಯ ವಿನೈಕಳ್
ನೊಡಿಯಾರುಮಳವೈ ಕ್ಕಣ್
ಕೊಡಿಯಾವಡು ಪುಳ್ಳುಯರ್ತ್ತ
ವಡಿವಾರ್ ಮಾದವನಾರೇ.

ಪ್ರ || ತೀಯ ವಿನೈಕಳ್–ಘೋರಪಾಪಗಳನ್ನು, ನೊಡಿಯಾರುಮ್–ಒಂದು ಕ್ಷಣವು ಮುಗಿಯುವ, ಅಳವೈಕ್ಕಣ್–ಅಷ್ಟರಲ್ಲಿಯೇ, ಕಡಿವಾರ್–ಛೇದಿಸುವವರು, ಅಡು–ಆಶ್ರಿತವಿರೋಧಿಗಳನ್ನು ನಾಶಪಡಿಸುವ, ಪುಳ್–ಗರುಡನನ್ನು, ಕೊಡಿಯಾ–ಧ್ವಜವಾಗಿ, ಉಯರ್ತ್ತ–ಎತ್ತಿಕೊಂಡಿರುವ, ವಡಿವು ಆರ್–ವಿಲಕ್ಷಣವಿಗ್ರಹಯುಕ್ತರಾದ, ಮಾಧವನಾರ್–ಶ್ರೀಯಃಪತಿಯಾದವರೇ.

( ಸ–ಗಾ–ರ || )—

**ಏವಂ ಮಹಾದುರಿತವಾರಿಧಿಶೋಷಣಂ ಯ–**
**ಶ್ಶೀಘ್ರಂ ಕರೋತಿ ಚ ಸ ಏವ ಹರಿಃ ಪರಾತ್ಮಾ |**
**ನಿತ್ಯಂ ಚಕಾಸ್ತಿ ಹಿ ಮಹೋಜ್ಜ್ವಲತಾರ್ಕ್ಷ್ಯಕೇತು–**
**ಶ್ಶ್ರೀದಿವ್ಯಮಙ್ಗಳಶುಭಾಶ್ರಯದಿವ್ಯಮೂರ್ತಿಃ ||**

ತಾ|| ಒಂದು ಕ್ಷಣಮಾತ್ರದಲ್ಲಿಯೇ ಘೋರವಾದ ಮಹಾಪಾತಕಗಳನ್ನೆಲ್ಲಾ ಧ್ವಂಸಮಾಡುವ ಭಗವಂತನು ಗರುಡಧ್ವಜನಾದ ದಿವ್ಯಮೂರ್ತಿಯುಳ್ಳ ಶ್ರಿಯಃಪತಿಯೇ. (ಈ ದಿವ್ಯ ದಂಪತಿಗಳೇ ಆಶ್ರಿತರ ಪಾಪಗಳನ್ನೆಲ್ಲಾ ಕ್ಷಣಮಾತ್ರದಲ್ಲಿಯೇ ಧ್ವಂಸಮಾಡಿ ಅವರನ್ನು ರಕ್ಷಿಸುವರೆಂದು ಭಾವವು).

(೧೧) ಮಾದವನ್ ಪಾಲ್ ಶಡಕೋಪನ್,
ತೀದವಮ್ಮ್ ಯುರೈತ್ತ,
ಏದಮಿಲಾಯಿರತ್ತಿಪ್ಪತ್ತು,
ಓದವಲ್ಲಾರ್ ಪಿಱವಾರೇ.

ಪ್ರ|| ಶಡಕೋಪನ್–ಶ್ರೀಶಠಾರಿಮುನಿವರ್ಯರು, ಮಾಧವನ್‌ಪಾಲ್–ಶ್ರಿಯಃಪತಿಯಾದ ಸರ್ವೇಶ್ವರನಲ್ಲಿ, ತೀದು–ತನ್ನ ಪರತ್ವವನ್ನು ನೋಡಿ ಉದಾಸೀನನಾಗಿ ದೂರ

ನಿಲ್ಲೋಣವೆಂಬ ದೋಷವೂ, ಅವನ್ - ಆಶ್ರಿತರ ದೋಷಗಳಂನೋಡಿ ಅವರನ್ನು ಕೈಬಿಡೋಣವೆಂಬ ನ್ಯೂನತೆಯೂ (ವೈಯರ್ಥ್ಯವೂ), ಇನ್ರಿ - ಇಲ್ಲದಂತೆ, ಉರೈತ್ತ - ಹೇಳಿದ, ಏವಮ್ ಇಲ್ - ಛನ್ದೋವ್ಯಾಕರಣಾದಿ ದೋಷಗಳಿಲ್ಲದ, ಆಯಿರತ್ತು - ಸಹಸ್ರಪದ್ಯಮಾಲಿಕೆಯೊಳು, ಇಪ್ಪತ್ತು - ಈ ಹತ್ತು ಪದ್ಯಗಳನ್ನು, ಓದವಲ್ಲಾರ್ - ಗುರೂಪದೇಶದಿಂದ ಕಲಿತು ಪಠನಮಾಡುವವರು, ಪಿಱಪ್ಪಾರ್ - ಪುನರ್ಜನ್ಮವಿಲ್ಲದವರಾಗುತ್ತಾರೆ (ಮೋಕ್ಷವನ್ನು ಪಡೆಯುತ್ತಾರೆ).

( ಸ-ಗಾ-ರ ॥ )—

ಶ್ರೀಮಾಧವಸ್ತುತಿಪರಂ ಕಿಲ ದೋಷಹೀನಂ
ಸಾಹಸ್ರಮಾಹ ಶುಭಮೇವ ಶಠಾರಿಸೂರಿಃ ।
ತತ್ರಾಪಿ ದಿವ್ಯದಶಕಂ ತದಿದಂ ತು ಭಕ್ತ್ಯಾ
ಯೇ ಯೇ ಪಠನ್ತಿ ನನು ತೇ ಭವಬನ್ಧಮುಕ್ತಾಃ ॥

ತಾ॥ ಶ್ರಿಯಃಪತಿಯಾದ ಭಗವನ್ತನಲ್ಲಿ ಯಾವದೋಷವೂ ಇಲ್ಲದಂತೆ ಅವನ ಕಲ್ಯಾಣಗುಣಗಳನ್ನೇ ಸಂಕೀರ್ತನಮಾಡಲು ಶ್ರೀಶಠಾರಿ ಮುನಿವರ್ಯರು ರಚಿಸಿರುವ ಸಹಸ್ರಗಾಥಾತ್ಮಕಪ್ರಬನ್ಧದೊಳು ಈ ದಶಕವನ್ನು ಗುರುಮುಖದಿಂದ ಕಲಿತು ಅಭ್ಯಸಿಸುವವರು ಪುನರ್ಜನ್ಮವಿಲ್ಲದೆ ಮೋಕ್ಷಸಾಮ್ರಾಜ್ಯವಂ ಪಡೆಯುವರೆಂದು ತಾತ್ಪರ್ಯ.

---

( ದ್ರ-ಉ-ಸಂ. )—

ದಾಸ್ಯೇಷು ದೇಶಸಮಯಾಙ್ಗಕಲಾಪಶುದ್ಧ್ಯ-
ದ್ರವ್ಯಾದಿನಾ ನ ನಿಯಮಃ ಪುರುಷೋತ್ತಮಸ್ಯ ।
ಭಕ್ತಿಃ ಪರಂ ಬಹುಮತಾ ತತ ಏವ ಸೋಽಯಂ
ಸ್ವಾರಾಧ ಇತ್ಯುಪದಿದೇಶ ಮುನಿಸ್ತು ಷಷ್ಠೇ ॥

( ದ್ರ-ಉ-ತಾ-ರ )—

ಅಕ್ರೀತೈರರ್ಘ್ಯಭಾವಾದನಿಯತವಿವಿಧಾಭ್ಯರ್ಚನಾದಲ್ಪತುಷ್ಟೇಃ
ಪ್ರಹ್ವಾವರ್ಜ್ಯೇಶಭಾವಾತ್ಸ್ವವಿಷಯನಿಯತೇಃ ಸ್ವಾದರಾತ್ ಸ್ವಾದುಭೂಮ್ನಾ ।
ಪಾದಾಸಕ್ತಪ್ರಸಕ್ತೇಸ್ಸಕೃದುಪಸದನೇ ಮೋಕ್ಷಣಾದ್ಧರ್ಮಸೌಸ್ಥ್ಯಾತ್
ಕ್ಷಿಪ್ರಕ್ಷಿಪ್ತಾಂಹಿತತ್ವಾತ್ ಸುಕರಭಜನತಾಂ ಮಾಧವಸ್ಯಾಭ್ಯಧತ್ತ ॥

(ಈ ಷಷ್ಠದಶಕದ ಸಾರಾಂಶ.)

ಈ ದಶಕದಲ್ಲಿ, ಭಗವನ್ತನ ಭಜನಕ್ಕೆ ದೇಶಸಮಯಾಂಗ ಕಲಾಪ ಕರ್ತೃ ದ್ರವ್ಯಾದಿ ನಿಯಮವಿಲ್ಲ; ನೀವು ಸುಲಭವಾದ ತೀರ್ಥ ಪುಷ್ಪ ಧೂಪಾದಿಗಳನ್ನು ಭಕ್ತಿಯೊಡನೆ ಸಮರ್ಪಿಸಿದರೆ ಸಾಕು. ಹೀಗೆ ಅನನ್ಯಪ್ರಯೋಜನರಾಗಿ ನೀವು ಅವನನ್ನೇ ಆರಾಧಿಸಿದರೆ ಲಕ್ಷ್ಮೀಸಮೇತನಾದ ಅವನು ತನ್ನ ಸೌಲಭ್ಯಾದಿ ಗುಣಗಳಿಂದ ನಿಮ್ಮ ಸಕಲ ಪಾಪಗಳನ್ನೂ ಧ್ವಂಸಮಾಡಿ ನಿಮಗೆ ನಿರತಿಶಯಾನನ್ದವನ್ನು ಕೊಟ್ಟು ರಕ್ಷಿಸುವನು—ಎಂದು ಶ್ರೀ ಶಠಾರಿಮುನಿವರ್ಯರು ತಮ್ಮ ಕಾರುಣ್ಯದಿಂದ ಚೇತನರಿಗೆ ಉಪದೇಶಿಸಿರುತ್ತಾರೆ.

---

ಶ್ರೀಃ

# ಪ್ರಥಮಶತಕದಲ್ಲಿ—ಸಪ್ತಮದಶಕ.

(ಪಿಱವಿತ್ತುಯರ್)

(ಈ ದಶಕದಲ್ಲಿ ಭಗವನ್ತನ ಆರಾಧನವು ಸುಖರೂಪವೆಂದು ಆಶ್ರಯಣಸ್ವಾರಸ್ಯವು ಹೇಳಲ್ಪಡುತ್ತದೆ.)

---

(೧) ಪಿಱವಿತ್ತುಯರಱ ಇಞ್ಞಾನತ್ತುಳ್ ನಿನ್ಱು,
ತುಱವಿ ಚ್ಚುಡರ್‌ವಿಳಕ್ಕಮ್ ತಲೈಪ್ಪೆಯ್‌ವಾರ್,
ಅಱವನೈ ಯಾೞಿಪ್ಪಡೈ ಯನ್ದಣನೈ
ಮಱವಿಯೈ ಯಿಱ್ಱಿ ಮನತ್ತು ವೈಪ್ಪಾರೇ.

ಪ್ರ॥ ಪಿಱವಿತ್ತುಯರ್–ಜನ್ಮದಿಂದ ಉಂಟಾದ ಕ್ಲೇಶವು, ಅಱ–ನಶಿಸುವುದಕ್ಕಾಗಿ, ಞಾನತ್ತುಳ್- ಆತ್ಮಾವಲೋಕನವೆಂಬ ಜ್ಞಾನಯೋಗದಲ್ಲಿ, ನಿನ್ಱು–ಆಸಕ್ತರಾಗಿದ್ದು, ತುಱವಿ–ಸರ್ವೋಪಾಧಿರಹಿತನಾದ, ಶುಡರ್ – ಸ್ವಯಂಪ್ರಕಾಶನಾದ ಜೀವಾತ್ಮನ, ವಿಳಕ್ಕಮ್–ಸಾಕ್ಷಾತ್ಕಾರವನ್ನು, ತಲೈಪ್ಪೆಯ್‌ವಾರ್–ಹೊಂದಲಪೇಕ್ಷಿಸುವ ಕೈವಲ್ಯಾರ್ಥಿಗಳು, ಅಱವನೈ–(ಅವರಿಗೂ ಕೂಡ ಫಲಪ್ರದನಾಗಿ) ಪರಮೋತ್ಕೃಷ್ಟ ಧರ್ಮವುಳ್ಳವನಾಗಿಯೂ, ಆೞಿಪ್ಪಡೈ – ಚಕ್ರಾಯುಧಧಾರಿಯಾಗಿಯೂ ಇರುವ, ಅನ್ದಣನೈ–ಸರ್ವಪಾವನನಾದ ಭಗವನ್ತನನ್ನೂ ಕೂಡ, ಮಱವಿಯೈ ಇಱ್ಱಿ

–ವಿಸ್ಮೃತಿಯಿಲ್ಲದೆ ಸಾಧನತ್ವೇನ, ಮನತ್ತು ವೈಪ್ಪಾರೇ–ಮನಸ್ಸಿನಲ್ಲಿ ಭಾವಿಸುವರಲ್ಲವೇ ! (ಸರ್ವಪ್ರಾಪ್ಯನಾದ ಭಗವಂತನನ್ನು ಕೂಡ ಹೀಗೆ ಸಾಧನತ್ವೇನ ಭಾವಿಸಬಹುದೇ ?—ಎಂದು ಕೈವಲ್ಯಾರ್ಥಿಗಳನ್ನು ಗರ್ಹಣಮಾಡುತ್ತಾರೆ.)

( ಸ–ಗಾ–ರ ॥ )—

ಆತ್ಮಾವಲೋಕನಪರಾ ಭವಬನ್ಧಮುಕ್ತ್ಯೈ
ತೇಜಃಪ್ರಭಾವಭರಿತಾ ಅಪಿ ಧಾರ್ಮಿಕಾಗ್ರ್ಯಮ್ ।
ಶ್ರೀಚಕ್ರಪಾಣಿಮನಘಂ ಪರಮಂ ಪವಿತ್ರಂ
ಪ್ರಾಪ್ಯಂ ಚ ಹನ್ತ! ನನು ಸಾಧನಮಾಮನನ್ತಿ ॥

ತಾ॥ (ನಿರತಿಶಯಭೋಗ್ಯನಾದ ಭಗವಂತನನ್ನೂ ಕೂಡ ಬಿಟ್ಟು ಪ್ರಯೋಜನಾನ್ತರ ಪರರಾಗಿರುವ ಕೈವಲ್ಯಾರ್ಥಿಗಳನ್ನು ನಿಂದಿಸುತ್ತಾರೆ) ಸಾಂಸಾರಿಕಕ್ಲೇಶನಿವೃತ್ತಿಗಾಗಿ ಜ್ಞಾನಯೋಗನಿಷ್ಠರಾಗಿದ್ದು ಆತ್ಮಸಾಕ್ಷಾತ್ಕಾರವಂ ಹೊಂದಲಪೇಕ್ಷಿಸುವ ಕೈವಲ್ಯಾರ್ಥಿಗಳು (ಅವರಿಗೂಕೂಡ ಫಲಪ್ರದನಾಗಿರುವ) ಅತ್ಯಂತಧಾರ್ಮಿಕನಾದ, ಚಕ್ರಪಾಣಿಯಾದ ಮತ್ತು ಸರ್ವಪಾವನನಾದ ಭಗವನ್ತನನ್ನೂ ಕೂಡ ಪ್ರಾಪ್ಯನೆಂದು ಭಾವಿಸದೆ, ತನಗೆ ಸಾಧನಭೂತನೆಂದು ಭಾವಿಸುತ್ತಾರಲ್ಲವೆ? (ಹೀಗೆ ಇವರು ಭಗವದನುಭವವಿಲ್ಲದೆ ಅಸತ್ಕಲ್ಪರಾಗಿ ವೃಥಾ ಕಾಲಹರಣವಂಮಾಡುತ್ತಾರೆಂದು ಕೈವಲ್ಯಾರ್ಥಿಗಳನ್ನು ಗರ್ಹಣಮಾಡುತ್ತಾರೆ).

(೨) ವೈಪ್ಪಾಮರುನ್ದಾಮಡಿಯರ್ಕ್ಕೆ ವಲ್ವಿನೈ-
ತ್ತುಪ್ಪಾಮ್ ಪುಲನ್ಗೈನ್ದುಮ್ ತುಞ್ಜಕ್ಕೊಡಾನವನ್,
ಎಪ್ಪಾಲೆವರ್ಕ್ಕುಮ್ ನಲತ್ತಾಲುಯರ್'ನ್ದುಯರ್'ನ್ದು,
ಅಪ್ಪಾಲವನೆಙ್ಗಳಾಯರ್ ಕೊೞುನ್ದೇ.

ಪ್ರ॥ ಅಡಿಯರ್ಕ್ಕೆ–ತನಗೆ ಶೇಷಭೂತರಾದವರನ್ನು, ವಲ್‌ವಿನೈ–ಪ್ರಬಲವಾದ ಕರ್ಮಗಳ, ತುಪ್ಪಾಮ್–ಮಾರ್ಗಗಳಲ್ಲಿ ಪ್ರವರ್ತಿಸುವ, ಪುಲನ್ಗೈನ್ದುಮ್–ಪಞ್ಚೇಂದ್ರಿಯಗಳಲ್ಲೂ (ಸಿಕ್ಕಿಕೊಂಡು), ತುಞ್ಜಕ್ಕೊಡಾನ್–ನಾಶಹೊಂದುವಂತೆ ಕೈಬಿಡದೆ ಇರುವವನಾಗಿಯೂ, ವೈಪ್ಪು ಆಮ್–(ಅವರಿಗೆ) ಪುರುಷಾರ್ಥವಾದ ನಿಧಿಯಾಗಿಯೂ, ಮರುನ್ದು ಆಮ್ – ವಿರೋಧಿನಿವರ್ತಕವಾದ ಔಷಧವಾಗಿಯೂ ಇರುವನು. (ಇಂತಹ ಈಶ್ವರನು ಯಾರೆಂದರೆ) ಅವನ್–ಆ ಭಗವನ್ತನು, ಎಪ್ಪಾಲ್–ಎಲ್ಲಾ ಕಡೆಗಳಲ್ಲೂ ಇರುವ, ಎವರ್'ಕ್ಕುಮ್–(ಬ್ರಹ್ಮರುದ್ರಾದಿ) ಎಲ್ಲಾ ಚೇತನರಿಗಿಂತಲೂ,

ನಲತ್ತಾಲ್-ಆನನ್ದದಿಂದ, ಉಯರ್‌ನ್ದು ಉಯರ್‌ನ್ದು-ಮೇಲೆ ಮೇಲೆ ವ್ಯಾಪಿಸಿ ಅತ್ಯನ್ತತನಾಗಿ, ಅಪ್ಪಾಲವರ್-ವಾಕ್ಕಿಗೂ ಮನಸ್ಸಿಗೂ ಗೋಚರವಾಗದಂತೆ ಆ ನಿತ್ಯ ವಿಭೂತಿಗೆ ಸೇರಿದವನಾಗಿರುವವನೇ, ಎಙ್ಗಳ್-ನಮ್ಮ ಭಾಗಕ್ಕೆ ಸೇರಿದ, ಆಯರ್ ಕೊೞುನ್ದು-ಗೋಪಾಲಕುಲತಿಲಕನು.

( ಸ-ಗಾ-ರ || )—

> ಭಕ್ತಾನ್ನ ಪಾಪಸರಣಿಷ್ವಪಿ ಚೇನ್ದ್ರಿಯಾಣಾಂ
> ಪ್ರಚ್ಯಾವಯೇದಯಮಿಹಾಚ್ಯುತ ಇನ್ದಿರೇಶಃ |
> ದಿವ್ಯೌಷಧಂ ಚ ನಿಧಿರಸ್ತಿ ಸಮಸ್ತಲೋಕಾ-
> ನಾನನ್ದಯನ್ ಪ್ರಭುರಹೋ ! ಮಮ ಗೋಪಬಾಲಃ ||

ತಾ|| (ಅವನನ್ನೇ ಆಶ್ರಯಿಸಿರುವವರಿಗೆ ಅವನು ಸಕಲವಿಧಬನ್ಧುವಾಗಿಯೂ, ನಿಧಿಯಾಗಿಯೂ, ಸಂಜೀವನೌಷಧನಾಗಿಯೂ ಇರುವನೆಂದು ಇಲ್ಲಿ ಹೇಳುತ್ತಾರೆ.) ತನ್ನ ಭಕ್ತರನ್ನು ದುರ್ಮಾರ್ಗಗಳಲ್ಲಿ ಪ್ರವರ್ತಿಸುವ ಪಂಚೇನ್ದ್ರಿಯಗಳಿಗೆ ವಶ್ಯರಾಗ ದಂತೆ ರಕ್ಷಿಸುತ್ತ, ಅವರಿಗೆ ನಿಧಿಯಾಗಿಯೂ ದಿವ್ಯೌಷಧವಾಗಿಯೂ ತಾನೇ ನಿಲ್ಲು ವನು. ಅವನೇ ಆನನ್ದಾದಿ ಕಲ್ಯಾಣಗುಣಗಳಿಂದ ಬ್ರಹ್ಮರುದ್ರಾದಿದೇವತೆಗಳ ನ್ನೆಲ್ಲಾ ಮೀರಿ ಅತ್ಯನ್ತ ಮಹೋನ್ನತಸ್ಥಾನವಾದ ಸಾಕ್ಷಾತ್ಪರಮಪದದಲ್ಲಿ ಅವಾಙ್ಮನ ಸಗೋಚರನಾಗಿದ್ದಾಗ್ಯೂ ಇಲ್ಲಿ ಅವತರಿಸಿ ಆಶ್ರಿತರಾದ ನಮಗೇ ಅಸಾಧಾರಣ ಸ್ವಾಮಿಯಾಗಿ ನಮ್ಮ ಭಾಗಕ್ಕೇ ಸೇರಿದ ಗೋಪಾಲಬಾಲಕನಾಗಿಯೂ ಇರುತ್ತಾನೆ. (ಇವರಿಂದ ಆಶ್ರಿತರಕ್ಷಣದಲ್ಲಿ ಅವನಿಗಿರುವ ಅತ್ಯನ್ತಾಭಿಮಾನವು ಸೂಚಿಸಲ್ಪಟ್ಟಿದೆ.)

> (೩) ಆಯರ್ ಕೊೞುನ್ದಾಯವರಾಲ್ ಪುಡೈಯುಣ್ಣುಮ್,
> ಮಾಯಪ್ಪಿರಾನೈ ಯೆನ್ಮಾಣಿಕ್ಕ ಚ್ಚೋದಿಯೈ,
> ತೂಯವಮುದೈ ಪ್ಪರುಗಿಪ್ಪರುಗಿ, ಯೆನ್
> ಮಾಯಪ್ಪಿಱವಿ ಮಯರ್ವಱುತ್ತೇನೇ.

ಪ್ರ|| ಆಯರ್-ಗೋಪಾಲಕರಿಗೆ, ಕೊೞುನ್ದಾಯ್-ತಿಲಕಪ್ರಾಯನಾಗಿದ್ದು, ಅವರಾಲ್-ಅವರಿಂದ, ಪುಡೈಯುಣ್ಣುಮ್-(ನವನೀತಚೌರ್ಯಾದಿಗಳಿಂದ) ಪೆಟ್ಟು ಗಳನ್ನು ತಿನ್ನುವ, ಮಾಯಪ್ಪಿರಾನೈ-(ಅದರಿಂದ ಅಳಲಾರಂಭಿಸಿ ಎಲ್ಲರನ್ನೂ ಮೋಹ ಗೊಳಿಸುವ) ಆಶ್ಚರ್ಯಭೂತನಾದಸ್ವಾಮಿಯನ್ನು, ಎನ್‌ಮಾಣಿಕ್ಕ ಚ್ಚೋದಿಯೈ-ನನ್ನ ಮಾಣಿಕ್ಯಪ್ರಕಾಶವುಳ್ಳವನನ್ನು, ತೂಯ ಅಮುದೈ-ಪರಿಶುದ್ಧವಾದ ಅಮೃತಸ್ವರೂಪ

ನನ್ನು, ಪರುಕಿಪ್ಪರುಕಿ–ಸನ್ತತವಾಗಿ ಪಾನಮಾಡಿ (ಅನುಭವಿಸಿ), ಎನ್–ನನ್ನ, ಮಾಯಪ್ಪಿಱವಿ–ಪ್ರಕೃತಿಜನ್ಯವಾದ ಜನ್ಮಸಮ್ಬನ್ಧದಿಂದ ಉಂಟಾದ, ಮಯರ್ವು–ಅಜ್ಞಾನವನ್ನು, ಅಱುತ್ತೇನ್–ನಾಶಪಡಿಸಿದೆನು.

( ಸ–ಗಾ–ರ || )—

**ಗೋಪಾಲಬಾಲಮಪಿ ಗೋಪವಶಂ ನಿಬದ್ಧಂ**
**ಮಾಣಿಕ್ಯಭಾಸಮಿಹ ಮಾಯಿಸುಧಾರಸಂ ಮೇ |**
**ಅಪೀಯ ಸನ್ತತಮಹಂ ಹತವಾನ್ ಪ್ರಮೋಹಂ**
**ಮಾಯಾಮಯಂ ಪ್ರಕೃತಿಜಂ ಮಮ ದುಸ್ಸಹಂ ತಮ್ ||**

ತಾ|| (ಆಶ್ರಿತವಾತ್ಸಲ್ಯದಿಂದ ಅವನು ಅಮೃತಪ್ರಾಯನಾಗಿದಾನೆಂದು ಅವನನ್ನು ಅನುಭವಿಸಿ ಆ ಅನುಭವದ ಸ್ವಾರಸ್ಯವನ್ನು ಹೇಳುತ್ತಾರೆ). ಗೋಪಕುಲತಿಲಕನಾಗಿ ಅವತರಿಸಿ ಆ ಗೋಪರಿಂದಲೂ ಪೆಟ್ಟುಗಳಂ ತಿಂದು ಅಳುವಷ್ಟು ಆಶ್ಚರ್ಯಚೇಷ್ಟಿತನಾಗಿ ಮಾಣಿಕ್ಯವರ್ಣನಾಗಿ ದಿವ್ಯತೇಜಃಪ್ರಕಾಶವುಳ್ಳ ಪರಿಶುದ್ಧವಾದ ಅಮೃತಸ್ವರೂಪನನ್ನು ನಾನು ಸನ್ತತವಾಗಿ (ಪಾನಮಾಡಿ) ಅನುಭವಿಸಿ, ನನ್ನ ಜನ್ಮಸಮ್ಬನ್ಧಿಯಾದ ಅಜ್ಞಾನವನ್ನು ಧ್ವಂಸಮಾಡಿದೆನು. (ಅವನ ಅನುಭವದಿಂದಲೇ ಸಕಲವಿರೋಧಿ ನಿವೃತ್ತಿಯೂ ಆಗುವುದೆಂದು ತಾತ್ಪರ್ಯ).

(೪) ಮಯರ್ವಱ ವೆನ್ಮನತ್ತೇ ಮನ್ನಿನಾನ್ ತನ್ನೈ,
ಉಯರ್ವಿನೈಯೇ ತರುಮೊಣ್ ಶುಡರ್ ಕಱ್ಱೈಯೈ,
ಅಯರ್ವಿಲಮರರ್‌ಕಳಾದಿಕ್ಕೊೞುನ್ದೈ ಯೆನ್
ಇಶೈವಿನೈ ಯೆನ್‌ಶೊಲ್ಲಿ ಯಾನ್ ವಿಡುವೇನೋ.

ಪ್ರ|| ಮಯರ್ವು–ಅಜ್ಞಾನವು, ಅಱ–ನಾಶಹೊಂದುವಂತೆ, ಎನ್ಮನತ್ತೇ–ನನ್ನ ಮನಸ್ಸಿನಲ್ಲಿ, ಮನ್ನಿನಾನ್‌ತನ್ನೈ–ನಿತ್ಯವಾಸಮಾಡುವವನಾಗಿಯೂ, ಉಯರ್ ವಿನೈಯೇ–(ನನಗೆ) ಜ್ಞಾನಭಕ್ತ್ಯಭಿವೃದ್ಧಿಯನ್ನೇ, ತರುಮ್ – ತರುವವನಾಗಿಯೂ, ಒಣ್–ಅತ್ಯನ್ತರಮ್ಯವಾದ, ಶುಡರ್‌ಕಱ್ಱೈಯೈ – ತೇಜೋರಾಶಿಯಾದ ಮೂರ್ತಿಯಾಗಿಯೂ, ಅಯರ್ವು–ವಿಸ್ಮೃತಿಯು, ಇಲ್–ಇಲ್ಲದ, ಅಮರರ್‌ಕಳ್–ನಿತ್ಯಸೂರಿಗಳಿಗೆ, ಆದಿಕ್ಕೊೞುನ್ದೈ – ಕಾರಣಭೂತನಾದ ಅಧಿಪತಿಯಾಗಿಯೂ, ಎನ್ ಇಶೈವಿನೈ–(ತನ್ನನ್ನು ಆಶ್ರಯಿಸುವುದಕ್ಕೆ ನನ್ನ ಸಮ್ಮತಿಯನ್ನು ತಾನೇ ಉಂಟು

ಮಾಡುವವನಾಗಿಯೂ, ( ಇರುವ ಸರ್ವೇಶ್ವರನನ್ನು ) ಎನ್ ಕೊಲ್ಲಿ – ಯಾವ ನ್ಯೂನತೆಯನ್ನು (ಅವನಲ್ಲಿ) ಹೇಳಿ, ಯಾನ್–ನಾನು (ಅವನ ಪಾದವನ್ನು ಆಶ್ರಯಿಸಿ ಅನುಭವರಸವನ್ನು ತಿಳಿದ ನಾನು), ವಿಡುವೇನೋ – ಬಿಡುವೆನೋ ? (ಎಂದಿಗೂ ಬಿಡಲಾರೆನು.)

( ಸ–ಗಾ–ರ || )—

**ಮೋಹಂ ಪ್ರಣಾಶ್ಯ ಮಮ ಯೋ ಹೃದಿ ನಿತ್ಯವಾಸೀ**
**ಜ್ಞಾನಾದಿವೃದ್ಧಿಕೃದಸೌ ಮಹಸಾಂ ಚ ರಾಶಿಃ |**
**ದೇವಾಧಿದೇವಮಪಿ ಮೇಽನುಮತಿಂ ದಧಾನಂ**
**ಚೇತೋಹರಂ ಮಮ ಕಥಂ ಬತ ತಂ ತ್ಯಜೇಯಮ್ ? ||**

ತಾ|| (ಇಷ್ಟು ಸರಸನಾದ ಇವನನ್ನು ನಾನು ಎಂದಿಗೂ ಬಿಡಲಾರೆನೆಂದು ಹೇಳುತ್ತಾರೆ.) ನನ್ನ ಅಜ್ಞಾನವು ನಾಶಹೊಂದುವಂತೆ ನನ್ನ ಮನಸ್ಸಿನಲ್ಲಿ ನಿತ್ಯವಾಸವಂ ಮಾಡುತ್ತ, ನನಗೆ ಜ್ಞಾನಭಕ್ತ್ಯಾದಿ ವರ್ಧಕನಾಗಿದ್ದು, ದಿವ್ಯತೇಜೋರಾಶಿಯಾಗಿ, ನಿತ್ಯಸೂರೀಶ್ವರನಾಗಿ, ನನಗೆ ತನ್ನಲ್ಲಿ ಆಭಿಮುಖ್ಯವನ್ನುಂಟುಮಾಡುವವನಾಗಿರುವ–ಸರ್ವೇಶ್ವರನನ್ನು (ಅವನಲ್ಲಿ ಯಾವವಿಧವಾದ ನ್ಯೂನತೆಯನ್ನು ಹೇಳಿ) ನಾನು ಬಿಡುವೆನೋ ? (ಎಂದಿಗೂ ಬಿಡಲಾರೆನೆಂದು ತಾತ್ಪರ್ಯ.)

(೨೧) ವಿಡುವೇನೋ ಎನ್‌ವಿಳಕ್ಕೈ ಯೆನ್ನಾವಿಯೈ,
ನಡುವೇ ವನ್ದುಯ್ಯಕ್ಕೊಳ್‌ಕಿನ್ರ ನಾದನ್ನೈ,
ತೊಡುವೇ ಶೆಯ್ದಿಳವಾಯ್‌ಚ್ಚಿಯರ್ ಕಣ್ಣಿನುಳ್,
ವಿಡವೇ ಶೆಯ್ದು ವಿಳಿಕ್ಕುಮ್ ಪಿರಾನ್ನೈಯೇ.

ಪ್ರ|| ಎನ್‌ವಿಳಕ್ಕೈ–ನನ್ನ ಜ್ಞಾನಪ್ರಕಾಶಕವಾದ ದೀಪವಾಗಿಯೂ, ಎನ್ ಆವಿಯೈ–ನನಗೆ ಆತ್ಮಭೂತನಾಗಿಯೂ (ಅನ್ತರಾತ್ಮನಾಗಿಯೂ), ನಡುವೇವನ್ದು–(ಅವಕಾಶವನ್ನು ನೋಡಿ) ಮಧ್ಯೇಬಂದು ಪ್ರವೇಶಿಸಿ, ಉಯ್ಯ (ನಾನು) ಉಜ್ಜೀವಿಸುವಂತೆ, ಕೊಳ್‌ಕಿನ್ರ–(ನನ್ನನ್ನು) ಸ್ವೀಕರಿಸುವ, ನಾದನ್ನೈ ಸ್ವಾಮಿಯಾಗಿಯೂ, ತೊಡುವೇ–ಕಪಟಚೇಷ್ಟಿತಗಳನ್ನೇ, ಶೆಯ್ದು – ಮಾಡಿ, ಇಳಆಯ್‌ಚ್ಚಿಯರ್ – ಚಿಕ್ಕವಯಸ್ಸಿನ ಗೋಪೀಜನರು, ಕಣ್ಣಿನುಳ್–ಕಣ್ಣುಗಳಿಗೆ, ವಿಡವೇಶೆಯ್ದು–ವಿಟಪುರುಷನಂತೆ ತೋರಿ ಧೂರ್ತಕೃತ್ಯವನ್ನೇಮಾಡಿ, ವಿಳಿಕ್ಕುಮ್ – ಅವರನ್ನು ತಾನೂ ನೋಡಿ ತನ್ನ ಕಟಾಕ್ಷದಿಂದ ವಶೀಕರಿಸುವ, ಪಿರಾನ್ನೈ ಉಪಕಾರಶೀಲನಾದ ಸ್ವಾಮಿಯನ್ನು, ವಿಡುವೇನೋ–(ನಾನು) ಬಿಡಬಲ್ಲೆನೋ ?

( ಸ–ಗಾ–ರ ॥ )—

ಜ್ಞಾನಪ್ರದೀಪಮಿಹ ಮೇ ಹೃದಿ ಸಮ್ಪ್ರವಿಶ್ಯ
ಸಞ್ಜೀವಯನ್ತಮಪಿ ಮೇ ಪ್ರಭುಮದ್ಭುತೈಸ್ತೈಃ ।
ವೃತ್ತೈಶ್ಚ ಹನ್ತ! ತರುಣೀರಪಿ ಗೋಪಿಕಾಸ್ತಾ
ಜಿತ್ವಾ ವಿಟಾಯಿತಮಮುನ್ತು ಕಥಂ ತ್ಯಜೇಯಮ್ ? ॥

ತಾ॥ (ಗೋಕುಲದಲ್ಲಿ ಗೋಪಕನ್ಯೆಯರು ಕೃಷ್ಣನನ್ನು ಹೇಗೆ ಬಿಡಲಾರದೆ ಇದ್ದರೋ ಹಾಗೆಯೇ ನಾನೂ ಇವನನ್ನು ಬಿಡಲಾರೆನೆಂದು ಹೇಳುತ್ತಾರೆ.) ನನಗೆ ಜ್ಞಾನಪ್ರಕಾಶಕನಾದ ದೀಪವಾಗಿದ್ದು, ನನಗೆ ಅನ್ತರಾತ್ಮನಾಗಿ ನಾನು ಉಜ್ಜೀವಿಸುವಂತೆ ಸ್ವೀಕರಿಸಿ, ಕಪಟವೃತ್ತಿಗಳಿಂದ ಗೋಪ್ಯಕನೆಯರನ್ನು ಮೋಹಗೊಳಿಸಿ ವಿಟಪುರುಷನಂತೆ ಧೂರ್ತಕೃತ್ಯಗಳನ್ನು ಮಾಡಿ ತನ್ನ ಕಟಾಕ್ಷದಿಂದ ಅವರನ್ನು ವಶೀಕರಿಸಿದಂತೆ ನನ್ನನ್ನೂ ವಶೀಕರಿಸಿ ಸಂಶ್ಲೇಷದಿಂದ ಧಾರಕನಾಗಿರುವ, ಈ ಮಹೋಪಕಾರಕನಾದ ನನ್ನ ಸ್ವಾಮಿಯನ್ನು ನಾನು ಹೇಗೆ ಬಿಡಬಲ್ಲೆನು ?

(೬) ಪಿರಾನ್ ಪೆರುನಿಲಙ್ ಕೀಣ್ಡವನ್, ಪಿನ್ನುಮ್
ವಿರಾಯ್ ಮಲರ್ತ್ತುೞಾಯ್ ವೇಯ್ನ್ದ ಮುಡಿಯನ್,
ಮರಾಮರಮೆಯ್ದ ಮಾಯವನ್ ಎನ್ನುಳ್
ಇರಾನೆನಿಲ್ ಪಿನ್ನೈ ಯಾನೊಟ್ಟುವೇನೋ.

ಪ್ರ॥ ಪಿರಾನ್–ಉಪಕಾರಕನಾಗಿದ್ದು, ಪೆರುನಿಲಮ್–ಮಹಾಪೃಥಿವಿಯನ್ನು, ಕೀಣ್ಡವನ್–(ಕೆಳಗಿಂದ ಕಿತ್ತು) ಉದ್ಧರಿಸಿದವನಾಗಿ, ಪಿನ್ನುಮ್–ತೊಡಿಸಲ್ಪಟ್ಟ, ವಿರಾಯ್–ಪರಿಮಳವುಳ್ಳ, ಮಲರ್–ಪುಷ್ಪಗಳುಳ್ಳ, ತುೞಾಯ್–ತುಳಸೀಮಾಲೆಯಿಂದ, ವೇಯ್ನ್ದ–ಪರಿವೃತವಾದ, ಮುಡಿಯನ್–ಕಿರೀಟವನ್ನು ಧರಿಸಿರುವ, ಮರಾಮರಮ್ ಎಯ್ದ–ಸಪ್ತಸಾಲವೃಕ್ಷಗಳನ್ನು (ಸುಗ್ರೀವಮಹಾರಾಜನಿಗೆ ವಿಶ್ವಾಸವುಂಟಾಗುವುದಕ್ಕಾಗಿ ಒಂದೇಬಾಣದಿಂದ) ಕತರಿಸಿದ, ಮಾಯವನ್–ಆಶ್ಚರ್ಯಭೂತನಾದ ಭಗವನ್ತನು, ಎನ್ನುಳ್–ನನ್ನೊಳು (ನನ್ನ ಹೃದಯದಲ್ಲಿ), ಇರಾನೆನಿಲ್–ಇರುವುದಿಲ್ಲವೆಂದರೆ, ಯಾನ್ (ಅವನನ್ನು ಬಿಟ್ಟಿರಲಾರದ) ನಾನು, ಒಟ್ಟುವೇನೋ–(ನನ್ನನ್ನು ಅವನು ಬಿಟ್ಟುಹೋಗುವುದಕ್ಕೆ) ಸಮ್ಮತಿಸುವೆನೋ ? (ಬಿಡಗೊಡೆನು–ಎಂದು ಭಾವವು.)

( ಸ–ಗಾ–ರ || )—

ಸ್ವಾವಿಸಾ ಧರೋದ್ಧರಣಕೃತ್ತುಲಸೀವೃತಶ್ರೀ–
ಮೌಳಿಪ್ರಭೂಷಿತಶಿರಾ ಮಮ ನಾಯಕೋಽಸೌ |
ಮಾಯಾಮಯೋ ಯದಿ ಭವೇದ್ಧೃತ ! ಗನ್ತುಕಾಮ
ಸ್ಸ್ವಾಲಜ್ಘ್ಯದಂ ಕಥಮಹಂ ತಮಿಹಾನುಮನ್ಯೇ ? ||

ತಾ|| ("ಇಂತಹ ನನ್ನನಾಯಕನು ನನ್ನನ್ನು ಅಗಲಿಹೋಗುವೆನೆಂದರೆ ನಾನು ಅದಕ್ಕೆ ಒಡಂಬಡುವೆನೋ ? "—ಎಂದು ಹೇಳುತ್ತಾರೆ.) ಪ್ರಳಯಕಾಲದಲ್ಲಿ ಕೆಳಗೆ ಹೂತುಹೋಗಿದ್ದ ಭೂಮಿಯನ್ನು (ವರಾಹರೂಪಿಯಾಗಿ ಉದ್ಧರಿಸಿದ, ತುಳಸೀ ಪುಷ್ಪಮಾಲಾಲಂಕೃತ ಕಿರೀಟಧಾರಿಯಾದ, ಸಪ್ತಸಾಲಚ್ಛೇದಿಯಾದ, ಮಾಯಾ ಚೇಷ್ಟಿತನಾದ ನನ್ನ ನಾಯಕನು ನನ್ನನ್ನು ಬಿಟ್ಟುಹೋಗುವೆನೆಂದರೆ ನಾನು ಹೋಗಗೊಡುವೆನೋ, ?

(೭) ಯಾನೊಟ್ಟಿ ಯೆನ್ನುಳಿರುತ್ತುವಮೆನ್ರಿಲರ್,
ತಾನೊಟ್ಟಿ ವನ್ದೆನ್ ತನಿನೆಞ್ಜೈ ವಞ್ಜಿತ್ತು,
ಊನೊಟ್ಟಿ ನಿನ್ರೆನ್ನುಯಿರಿಲ್ ಕಲನ್ದು ಇಯಲ್–
ವಾನೊಟ್ಟುಮೋ ಇನಿಯೆನ್ನೈ ನೆಕಿೞ್ಕ್ಕವೇ.

ಪ್ರ|| ಯಾನ್–ನಾನು, ಒಟ್ಟಿ–ಸಮ್ಮತಿಸಿ, ಎನ್ನುಳ್–ನನ್ನೊಳು, ಇರುತ್ತುವಮ್–ಇರುವಹಾಗೆ ಮಾಡುವೆನು, ಎನ್ರಿಲರ್–ಎಂದು ನೆನೆಯಲಿಲ್ಲ. ತಾನ್–ತಾನೇ, ಒಟ್ಟಿ ವನ್ದು – ಪ್ರತಿಜ್ಞೆಮಾಡಿ ಬಂದು, ಎನ್ ತನಿ ನೆಞ್ಜೈ – ನನ್ನ ಸ್ವತನ್ತ್ರವಾದ ಮನಸ್ಸನ್ನು, ವಞ್ಜಿತ್ತು–ನನಗೆ ತಿಳಿಯದಂತೆ ವಶೀಕರಿಸಿ, ಊನ್ ಒಟ್ಟಿ–ಶರೀರದಲ್ಲಿ ಸೇರಿಕೊಂಡು, ನಿನ್ರು–ಒಳಗೆ ನಿಂತು, ಎನ್ ಉಯಿರಿಲ್–ನನ್ನ ಆತ್ಮನೊಡನೆ, ಕಲನ್ದು –ಸೇರಿಕೊಂಡು, ಇಯಲ್ವಾನ್–ಹೀಗೆ ಮಾಡುವ ಸ್ವಭಾವವುಳ್ಳ, ಸರ್ವೇಶ್ವರನು, ಇನಿ ಎನ್ನೈ ನೆಕಿೞ್ಕ್ಕ–ಇನ್ನು ಮೇಲೆ ನನ್ನನ್ನು ನಾನು ಬಿಡಿಸಿಕೊಳ್ಳಲು, ಒಟ್ಟುಮೋ –ಸಮ್ಮತಿಸುವನೋ ?

( ಸ–ಗಾ–ರ || )—

ನಾಹಂ ಸ್ವಯಂ ತಮಿಹ ಮಯ್ಯನುಮತ್ಯ ಕುರ್ವೇ !
ಸೋಽಯಂ ಸ್ವಯಂ ಮಮ ಮನೋಽಪಿ ಚ ವಞ್ಚಯಿತ್ವಾ |
ದೇಹಂ ಪ್ರವಿಶ್ಯ ಮಮ ಚಾತ್ಮನಿ ಸಙ್ಗತಸ್ಸನ್
ಕಿಂ ಮಾಂ ಚ ದೂರಮನುಮನ್ಯತ ಏವ ಗನ್ತುಮ್ ? ||

ತಾ|| (ನಾನು ಅವನನ್ನು ಬಿಡಲು ಯತ್ನಿಸಿದರೂ ಅವನು ನನ್ನನ್ನು ಬಿಡಲೊಡಂಬಡನು—ಎನ್ನು ಅವರ ಅಭಿಪ್ರಾಯವನ್ನು ಹೇಳುತ್ತಾರೆ.) ನಾನೇ ಅವನನ್ನು ಪ್ರಯತ್ನಪೂರ್ವಕವಾಗಿ ನನ್ನಲ್ಲಿ ಸೇರಿಸಿಕೊಳ್ಳಲಿಲ್ಲ. ಅವನೇ ಬಂದು ನನ್ನನ್ನು ವಂಚಿಸಿ ನನ್ನ ಮನಸ್ಸನ್ನು ವಶೀಕರಿಸಿ ನನ್ನ ಶರೀರದೊಂದಿಗೂ ಆತ್ಮನೊಂದಿಗೂ ಸೇರಿ ಕಲೆತು ಒಂದಾಗಿರುವವನು ಈಗ ನಾನು ತಪ್ಪಿಸಿಕೊಳ್ಳಲು ಪ್ರಯತ್ನಿಸಿದರೆ ಬಿಡುವನೋ ? (ಎಂದಿಗೂ ಬಿಡಲಾರನೆಂದು ತಾತ್ಪರ್ಯ.)

(೮) ಎನ್ನೈ ನೆಕಿೞ್ಕ್ಕಿಲುಮೆನ್ನುಡೈ ನನ್ನೆಞ್ಜಮ್
ತನ್ನೈ ಯಕಲ್ವಿಕ್ಕ ತ್ತಾನುಮ್ ಕಿಲ್ಲಾನಿನಿ,
ಪಿನ್ನೈ ನೆಡುಮ್ಪಣೈತ್ತೋಳ್ ಮಕಿೞ್ ಪೀಡುಡೈ,
ಮುನ್ನೈ ಯಮರರ್ ಮುೞುಮುದಲಾನೇ.

ಪ್ರ|| ಎನ್ನೈ-ನನ್ನನ್ನು, ನೆಕಿೞ್ಕ್ಕಿಲುಮ್ - ಅವನು ದೂರಮಾಡಿದಾಗ್ಯೂ, ಎನ್ನುಡೈ-ನನ್ನ, ನಲ್ನೆಞ್ಜಮ್ ತನ್ನೈ-ಒಳ್ಳೇ (ಅವನ ಕಲ್ಯಾಣಗುಣಗಳಲ್ಲಿ ಮಗ್ನವಾದ) ಮನಸ್ಸನ್ನು, ತಾನುಮ್-ಸರ್ವಶಕ್ತನಾದ ಅವನೂಕೂಡ, ಇನಿ-ಇನ್ನು ಮೇಲೆ, ಅಕಲ್ವಿಕ್ಕ-ಬೇರೆಮಾಡಿ (ತನ್ನನ್ನು ತಾನು) ಬಿಡಿಸಿಕೊಳ್ಳಲು, ಕಿಲ್ಲಾನ್-ಸಮರ್ಥನಲ್ಲ (ಅವನು) ಪಿನ್ನೈ-ನಪ್ಪಿನ್ನೈಯೆಂಬ ಗೋಪಿಯ, ನೆಡು-ದೀರ್ಘವಾದ, ಪಣೈ-ಪುಷ್ಟ (ದಪ್ಪ)ವಾದ, ತೋಳ್-ತೋಳುಗಳಲ್ಲಿ (ಆಲಿಂಗನವೇಳೆಯಲ್ಲಿ) ಸಿಕ್ಕಿಕೊಳ್ಳುವ, ಮಕಿೞ್-ಭಾಗ್ಯವೆಂಬ, ಪೀಡುಡೈ - ಮಹಿಮೆಯುಳ್ಳ, ಮುನ್ನೈ-ಪೂರ್ವಿಕರಾದ (ನಿತ್ಯರಾದ), ಅಮರರ್-ದಿವ್ಯಸೂರಿಗಳಿಗೆ, ಮುೞು-ಧಾರಕಾದಿ ಸಮಸ್ತವಸ್ತುಗಳಿಗೂ, ಮುದಲಾನೇ-ತಾನೇ ಕಾರಣಭೂತನಾದವನಲ್ಲವೇ ?

( ಸ–ಗಾ–ರ || )—

ಮಾಂ ದೂರತಸ್ತ್ಯಯಮಸೌ ಯದಿ ಸನ್ತ್ಯಜೇನ್ಮೇ
ಚಿತ್ತಂ ತಥಾಽಪಿ ನ ವಿಯೋಜಯಿತುಂ ಕ್ಷಮಸ್ಸ್ಯಾತ್ |
ನೀಳಾಂ ಸುದೀರ್ಘಶುಭವೃತ್ತಭುಜಾಂ ಸ್ಪೃಹೃಷ್ಟ-
ಸ್ಸಂಶ್ಲಿಷ್ಯ ತದ್ವಶಗ ಏವ ಹಿ ಸೂರಿನಾಥಃ ||

ತಾ|| (ಒಂದುವೇಳೆ ಅವನೇ ಬಿಡಿಸಿಕೊಳ್ಳಲು ಯತ್ನಪಟ್ಟರೂ ನನ್ನ ಮನಸ್ಸಿನಿಂದ ಹೊರಗೆಹೊರಡಲು ಅವನಿಗೂ ಸಾಮರ್ಥ್ಯವಿಲ್ಲನೆಂದು ಹೇಳುತ್ತಾರೆ.) ನನ್ನನ್ನು ದೂರಬಿಟ್ಟರೂ ಸರ್ವಶಕ್ತನಾದ ಅವನೂ ನನ್ನ ಮನಸ್ಸಿನಿಂದ ದೂರ

ಹೋಗಲು ಪ್ರಯತ್ನಿಸಿದರೂ, ಅದು ಸಾಧ್ಯವಾಗಲಾರದು. ಹೇಗೆಂದರೆ, ದಿವ್ಯ ಸೂರಿಗಳಿಗೂ ಧಾರಕಪೋಷಕಾದಿಭೂತನಾಗಿ ಆದಿಕಾರಣವಸ್ತುವಾದ ಆ ಪರಾತ್ಪರನೇ ಅಲ್ಲವೇ ನಪ್ಪಿನ್ನೈಯೆಂಬ ನೀಳಾದೇವಿಯ ದೀರ್ಘವಾಗಿಯೂ ಪುಷ್ಟವಾಗಿಯೂ ಇರುವ ತೋಳುಗಳಲ್ಲಿ (ಆಲಿಂಗನವೇಳೆಯಲ್ಲಿ) ಸಿಕ್ಕಿಕೊಂಡು ಬಿಡಿಸಿಕೊಳ್ಳಲಾರದೆ ಹೋದ ಮಹಾಭಾಗ್ಯಶಾಲಿಯು !!! (ಅವಳ ತೋಳುಗಳಿಂದ ಬಿಡಿಸಿಕೊಳ್ಳಲಾರದೆ ಹೋದವನು ನನ್ನ ಮನಸ್ಸಿನಿಂದ ಹೊರಗೆಹೋಗಬಲ್ಲನೋ ? —ಹೋಗಲಾರನು ಎಂದು ತಾತ್ಪರ್ಯ.)

(೯) ಅಮರರ್ ಮುೞುಮುದಲಾಕಿಯ ಆದಿಯೈ,
ಅಮರರ್ಕ್ಕಮುದೀನ್ದ ಆಯರ್ ಕೊೞುನ್ದೈ,
ಅಮರವೞುಮ್ಬುತ್ತುೞಾವಿ ಯೆನ್ನಾವಿ
ಅಮರತ್ತೞುವಿಱ್ಱಿನಿ, ಯಕಲುಮೋ.

ಪ್ರ॥ ಅಮರರ್-ನಿತ್ಯಸೂರಿಗಳಿಗೆ, ಮುೞು-ಸ್ವರೂಪಸ್ಥಿತಿಪ್ರವೃತ್ತಿಗಳಿಗೆಲ್ಲಾ-ಮುದಲಾಕಿಯ-ಕಾರಣವಾಗಿರುವ, ಆದಿಯೈ-ಪ್ರಧಾನನಾದವನನ್ನು, ಅಮರರ್ಕ್ಕು-ದೇವತೆಗಳಿಗೆ, ಅಮುದು ಈನ್ದ-ಅಮೃತವನ್ನು ಕೊಟ್ಟ, ಆಯರ್ ಕೊೞುನ್ದೈ-ಗೋಪಾಲಕುಲತಿಲಕನನ್ನು, ಎನ್ ಆವಿ-ನನ್ನ ಆತ್ಮವಸ್ತುವು, ಅಮರ-ಅನನ್ಯಾರ್ಹಸಂಶ್ಲೇಷವುಂಟಾಗುವಂತೆ, ಅೞುಮ್ಬ-ವಿಶ್ಲೇಷಸಹವಲ್ಲದೆ ಸಂಯುಕ್ತವಾದಮೇಲೆ, ತುೞಾವಿ-ಸ್ವರೂಪಾದಿ ಸಮಸ್ತವಿಷಯಗಳಲ್ಲೂ ಸಂಚರಿಸಿ, ಅಮರ-ಪೃಥಕ್ಸ್ಥಿತ್ಯಾದಿಗಳಿಲ್ಲದಂತೆ, ತೞುವಿಱ್ಱು-ಚೆನ್ನಾಗಿ ಸೇರಿಕೊಂಡಮೇಲೆ, ಇನಿ ಅಕಲುಮೋ, ಇನ್ನುಮೇಲೂ ಬಿಟ್ಟುಹೋಗುವ ಸಂಭವವುಂಟೋ ?

( ಸ–ಗಾ–ರ ॥ )—

ಸೂರೀನ್ದ್ರನಾಥಮಪಿ ಚಾದಿವಿಭುಂ ಸುರಾಣಾಂ
ದಿವ್ಯಾಮೃತಪ್ರದಮಮುಂ ಕಿಲ ಗೋಪಬಾಲಮ್ ।
ಆತ್ಮಾ ಮಮ ಸ್ವಯಮುಪೇತ್ಯ ಚ ಸಮ್ಪ್ರವಿಶ್ಯ
ಸ್ವೈರಂ ವಿಹೃತ್ಯ ಮಿಳಿತೋಽಸ್ತಿ ! ಕಥಂ ತ್ಯಜೇತ್ತಮ್ ?॥

ತಾ॥ (ಸರ್ವಪ್ರಕಾರಗಳಲ್ಲಿಯೂ ಅವನ ಸಂಶ್ಲೇಷವನ್ನುಪಡೆದ ನನ್ನ ಆತ್ಮವಸ್ತುವು ಇನ್ನು ಅವನನ್ನು ಬಿಡುವ ಪ್ರಸಂಗವೇ ಇಲ್ಲವೆಂದು ಹೇಳುತ್ತಾರೆ.) ನಿತ್ಯಸೂರಿಗಳಿಗೂಕೂಡ ಪ್ರಧಾನನಾಗಿ, ದೇವತೆಗಳಿಗೆ ಅಮೃತಪ್ರದನಾಗಿ, ಗೋಪಾ

ಲಕುಲತಿಲಕನಾಗಿ, ಹೀಗೆ ನನ್ನೊಡನೆ ಏಕೀಭೂತನಾಗಿ ಅಪೃಥಕ್‌ಸ್ಥಿತಿಯುಳ್ಳ ಈ ನನ್ನ ನಾಯಕನನ್ನು ನನ್ನ ಆತ್ಮವಸ್ತುವು ಇಂತಹ ಸಂಶ್ಲೇಷವುಂಟಾದಮೇಲೆ ಇನ್ನೂ ಬಿಡುವಸಂಭವವುಂಟೋ? ಆ ಪ್ರಸಕ್ತಿಗೆ ಅವಕಾಶವೇ ಇಲ್ಲವೆಂದು ತಾತ್ಪರ್ಯ.

**(೧೦) ಅಕಲಿಲಕಲುಮಣುಕಿಲಣುಕುಮ್,**
**ಪುಕಲುಮರಿಯರ್ ಪೊರುವಲ್ಲನೆಮ್ಮಾನ್,**
**ನಿಕರಿಲವನ್ ಪುಕಳ್ ಪಾಡಿಯಿಳೈಪ್ಪಿಲಮ್**
**ಪಕಲುಮಿರವುಮ್ ಪಡಿನ್ದು ಕುಡೈನ್ದೇ.**

ಪ್ರ॥ ಅಕಲಿಲ್-(ಪ್ರಯೋಜನಾನ್ತರಪರರಾಗಿ) ದೂರಹೋದರೆ, ಅಕಲುಮ್-ತಾನೂ ದೂರ ನಿಲ್ಲುವನು, ಅಣುಕಿಲ್-(ಅನನ್ಯಪ್ರಯೋಜನರಾಗಿ) ಅವನನ್ನೇ ಆಶ್ರಯಿಸಿದರೆ, ಅಣುಕುಮ್-ಅವರೊಡನೆ ಒಂದಾಗಿ ಸೇರಿರುವನು, ಪುಕಲುಮ್-(ಅನ್ಯ ಪರರಿಗೆ) ಸಮೀಪಿಸಲು, ಅರಿಯರ್-ಶಕ್ಯನಲ್ಲದವನು, ಪೊರುವು-(ಆಶ್ರಿತರು) ಸಮೀಪಿಸಲು ತಡೆಯುಳ್ಳವನಾಗಿ, ಅಲ್ಲನ್-ಇಲ್ಲದವನು, ಎಮ್ಮಾನ್-ನಮಗೆ ಸ್ವಾಮಿಯಾಗಿರುವವನು, ನಿಕರ್‌ಇಲ್-ಹೀಗೆ ಅಸದೃಶನಾದ, ಅವನ್-ಅವನ, ಪುಕಳ್-ಕಲ್ಯಾಣಗುಣಗಳನ್ನು, ಪಾಡಿ-(ಪ್ರೀತಿಯಿಂದ) ಹಾಡಿ, ಪಕಲುಮ್ ಇರವುಮ್-ಹಗಲೂ ರಾತ್ರಿಯೂ, ಪಡಿನ್ದು-(ಬಿಡದೆ) ಒಳಗೆ ಪ್ರವೇಶಿಸಿ, ಕುಡೈನ್ದು-ಸರ್ವತ್ರ ಸಂಗತರಾಗಿ ಸೇರಿ, ಇಳೈಪ್ಪು ಇಲಮ್-ಶ್ರಾನ್ತರಾಗದೆ ಇರುವೆವು.

( ಸ-ಗಾ-ರ ॥ )—

**ವಿಶ್ಲೇಷಿಣಂ ಕಿಲ ವಿಯೋಜಯತಿ ಸ್ವಯಂ ಯ-**
**ಸ್ಸಂಶ್ಲೇಷಿಸಙ್ಗತಿರತೋಽಸುಲಭೋಽಸ್ತಿ ವೀರಃ ।**
**ಮನ್ನಾಯಕೋಽಪ್ರತಿಭಟಸ್ಸ್ವಗುಣೈರನನ್ತೈ-**
**ಸ್ಸಙ್ಕೀರ್ತ್ಯ ತಂ ನನು ದಿವಾನಿಶಮಸ್ಮ್ಯತೃಪ್ತಃ ॥**

ತಾ॥ (ನನ್ನೊಡನೆ ಸೇರಿ ಒಂದಾದ ಶ್ರೀಭಗವನ್ತನ ಕಲ್ಯಾಣಗುಣಗಳನ್ನು ಅನವರತವಾಗಿ ಅನುಭವಿಸಿದರೂ ನಾನು ತೃಪ್ತನಾಗುವುದಿಲ್ಲನೆಂದು ಹೇಳುತ್ತಾರೆ.) ಅನಾಶ್ರಿತರಿಗೆ ದೂರಸ್ಥನಾಗಿಯೂ, ಆಶ್ರಿತರೊಡನೆ ಸೇರುವವನಾಗಿಯೂ, ಅನ್ಯಪರರಿಗೆ ಅಸುಲಭನಾಗಿಯೂ, ಸ್ವೀಯರಿಗೆ ಸರ್ವಸುಲಭನಾಗಿಯೂ ಇರುವ ಅಸ್ವಾದೃಶನಾದ ನನ್ನ ಸ್ವಾಮಿಯ ಕಲ್ಯಾಣಗುಣಗಳನ್ನು ಹಾಡಿ ದಿವಾರಾತ್ರವೂ ಆ ಗಾನಾನುಭವದಲ್ಲಿಯೇ ಮಗ್ನನಾಗಿದ್ದರೂ ನಾನು ತೃಪ್ತಿಯನ್ನು ಹೊಂದಲಾರೆನು.

(೧೧) ಕುಡ್ಣೈನ್ದು ವಣ್ಡುಣ್ಣುಮ್ ತುೞಾಯ್ ಮುಡಿಯಾನ್ೈ,
ಅಡ್ೈನ್ದ ತೆನ್ ಕುರುಕೂರ್ ಚ್ಚಡಕೋಪನ್
ಮಿಡ್ೈನ್ದ ಶೊಲ್ ತೊಡ್ೈಯಾಯಿರತ್ತಿಪ್ಪತ್ತುಮ್,
ಉಡ್ೈನ್ದು ನೋಯ್ಕಳ್ೈ ಯೋಡುವಿಕ್ಕುಮೇ.

ಪ್ರ॥ ವಣ್ಡು–ಭ್ರಮರಗಳು, ಕುಡ್ಣೈನ್ದು–ಪ್ರವೇಶಿಸಿ, ಉಣ್ಣುಮ್–ಮಕರನ್ದ ಪಾನಮಾಡುವ, ತುೞಾಯ್ – ತುಳಸೀಮಾಲೆಯನ್ನು, ಮುಡಿಯಾನ್ೈ–ಕಿರೀಟದಲ್ಲಿ ಧರಿಸಿರುವ ಸರ್ವೇಶ್ವರನನ್ನು, ಅಡ್ೈನ್ದ – ಸರ್ವಪ್ರಕಾರದಿಂದಲೂ ಆಶ್ರಯಿಸಿದ, ತೆನ್–ರಮ್ಯವಾದ, ಕುರುಕೂರ್–ಕುರುಕಾಪುರಿಯಲ್ಲಿ ಅವತರಿಸಿದ, ಶಡಕೋಪನ್–ಶ್ರೀಶಠಾರಿಯ, ಮಿಡ್ೈನ್ದ–ಸಂಗತವಾದ, ಶೊಲ್–ಸೂಕ್ತಿಗಳಿಂದ, ತೊಡ್ೈ–ಮಾಲೆಯಾಗಿ ರಚಿಸಲ್ಪಟ್ಟ, ಆಯಿರತ್ತು–ಸಹಸ್ರಪದ್ಯಮಾಲೆಯಲ್ಲಿ, ಇಪ್ಪತ್ತು–ಈ ಹತ್ತು ಪದ್ಯಗಳು, ನೋಯ್ಕಳ್ೈ–ಪಾಪರೂಪವಾದ ಸಕಲವ್ಯಾಧಿಗಳನ್ನೂ, ಉಡ್ೈನ್ದು–ಧ್ವಂಸಮಾಡಿ, ಓಡುವಿಕ್ಕುಮ್–ಓಡುವನ್ತೆ (ನಷ್ಟವಾಗುವಂತೆ) ಮಾಡುವುವು.

( ಸ–ಗಾ–ರ ॥ )—

ಭೃಂಗಾವೃತಾರ್ದ್ರತುಲಸೀಧರಮೌಳಿದೀಪ್ರಂ
ಸ್ತುತ್ವಾ ಶಠಾರಿಮುನಿರಾಹ ಶುಭಂ ಸಹಸ್ರಮ್ ।
ತತ್ರೇದಮುಸ್ತಿ ದಶಕಂ ಶುಭವಾರ್ತಿಮಾಲಾಂ
ಸರ್ವಾಂ ಚ ಹನ್ತಿ ಜಗತಾಂ ಸಹಸೈವ ದಿವ್ಯಮ್ ॥

ತಾ॥ (ಕೊನೆಯಲ್ಲಿ ಈ ದಶಕವನ್ನು ಪಠನಮಾಡುವವರಿಗೆ ಉಂಟಾಗುವ ಫಲವನ್ನು ಸೂಚಿಸುತ್ತಾರೆ.) ದಿವ್ಯತುಲಸೀಮಾಲಾಲಂಕೃತ ಕಿರೀಟಧಾರಿಯಾದ ಶ್ರೀಭಗವನ್ತನನ್ನು ಸರ್ವಪ್ರಕಾರದಲ್ಲೂ ಆಶ್ರಯಿಸಿದ ಶ್ರೀಶಠಾರಿಮುನಿವರ್ಯರ ಸೂಕ್ತಿಮಾಲೆಯಾದ ಸಹಸ್ರಗಾಥಾತ್ಮಕ ಮಹಾಪ್ರಬನ್ಧದೊಳು ಈ ದಶಕವು ಪಠನಮಾಡುವವರಿಗೆ ಉಂಟಾಗುವ ಸಕಲವಿಧ ಪಾಪವ್ಯಾಧಿಗಳನ್ನೂ ನಿರ್ಮೂಲಮಾಡಿ ನಾಶಪಡಿಸಿ, ಅವರನ್ನು ರಕ್ಷಿಸುವುದು—ಎಂದು ತಾತ್ಪರ್ಯ.

---

( ದ್ರ–ಉ–ಸಂ. )—

ಪುಂಸಶ್ಶ್ರಿಯಃ ಪ್ರಣಯಿನಃ ಪುರುಷಾರ್ಥಸೀಮ್ನೋ
ನಿರ್ವ್ಯಾಜಫಲಾನ್ತರಪರಾನ್ನಿರವದ್ಯಗನ್ಧಾತ್ ।
ತದ್ದೃಶ್ಯತಾರ್ಹಗುಣಜಾತಸಮರ್ಥನೇನ
ತತ್ಸೇವನಂ ಶರಸಮಾಹ ಸ ಸಪ್ತಮೇನ ॥

( ದ್ರ-ಉ-ತಾ-ರ || )—

**ಸಚ್ಚಿತ್ತಾತ್ಕರ್ಷಹೇತೋಃ ರಘಶಮನನಿಧೇರ್ನಿತ್ಯಭೋಗ್ಯಾಮೃತಸ್ಯ**
**ತ್ಯಾಗೇ ಹೇತೂಜ್ಝಿತಸ್ಯ ಪ್ರವಹದುಪಕೃತೇರ್ದುಸ್ತ್ಯಜಸ್ವಾನುಭೂತೇಃ |**
**ತ್ಯಾಗಾಕಾಂಕ್ಷಾನಿರೋದ್ಧುಃ ಶ್ರಿತಹೃದಯಪೃಥಕ್ಕಾರನಿತ್ಯಾಕ್ಷಮಸ್ಯ**
**ಸ್ವಾತ್ಮಶ್ಲಿಷ್ಟಸ್ಯ ಗಾಯಚ್ಛ್ರಮಹರಯಶಸಸ್ಸೇವನಂ ಸ್ವಾದ್ವವೋಚತ್ ||**

---

**(ಈ ಸಪ್ತಮದಶಕದ ಸಾರಾಂಶ.)**

ಈ ದಶಕದಲ್ಲಿ ಪರಮಪುರುಷಾರ್ಥವಾದ ಶ್ರೀಮನ್ನಾರಾಯಣನ ಸಮಾಶ್ರಯಣವಂ ಬಿಟ್ಟು ಅನ್ಯಫಲಾಪೇಕ್ಷಿಗಳಾದವರನ್ನು ನಿಂದಿಸಿ, ಅವನ ಕಲ್ಯಾಣಗುಣಗಳನ್ನು ನಿರೂಪಿಸಿ, ಅವನ ಆರಾಧನವು ಭಕ್ತರಿಗೆಲ್ಲಾ ಸುಖರೂಪವಾಗಿರುವುದೆಂದು ಪ್ರತಿಪಾದಿಸಿ, ಅವನ ಆಶ್ರಯಣದಲ್ಲಿರುವ ಸ್ವಾರಸ್ಯವನ್ನು ವರ್ಣಿಸಿ ಇರುತ್ತಾರೆ.

---

# ಶ್ರೀಃ

# ಪ್ರಥಮಶತಕದಲ್ಲಿ—ಅಷ್ಟಮದಶಕ.

## (ಓಡುಮ್ ಪುಳ್ಳೇಱಿ)

(ಈ ದಶಕದಲ್ಲಿ—ಆಶ್ರಿತರ ವಿಷಯದಲ್ಲಿ ಭಗವಂತನಿಗೆ ಇರುವ ಆರ್ಜವಗುಣವು ವಿವರಿಸಲ್ಪಡುತ್ತದೆ. ಇದು, ದಿವ್ಯೈಶ್ವರ್ಯವರ್ಣನಪರವೆಂದೂ ಹೇಳುತ್ತಾರೆ.)

---

(೧) ಓಡುಮ್ ಪುಳ್ಳೇಱಿ | ಶೂಡುಮ್ ತಣ್ ತುೞಾಯ್,
ನೀಡುನಿನ್ಱವೈ | ಆಡುಮಮ್ಮಾನೇ.

ಪ್ರ|| ಅಮ್ಮಾನ್-(ನಿರುಪಾಧಿಕ) ಸ್ವಾಮಿಯಾದವನು, ಪುಳ್ ಏಱಿ-ಗರುಡಾರೂಢನಾಗಿ, ಓಡುಮ್-ಸಂಚರಿಸುವನು. ತಣ್-ಶೀತಳವಾದ (ಶ್ರಮಹರವಾದ), ತುೞಾಯ್ – ತುಳಸೀಮಾಲೆಯನ್ನು, ಶೂಡುಮ್-ಧರಿಸುವನು. ನೀಡುನಿನ್ಱವೈ-ನಿತ್ಯವಾಗಿರುವ ಆತ್ಮವಸ್ತುಗಳೊಡನೆ, ಆಡುಮ್-ಕೂಡಿ ಸಂಶ್ಲೇಷಿಸುವನು.

( ಸ-ಗಾ-ರ || )—

**ಆರುಹ್ಯ ಗರುಡಂ ಭಾತಿ ದಿವ್ಯಾಂ ಚ ತುಲಸೀಂ ವಹನ್ |**
**ನಿತ್ಯಸೂರಿವರ್ಯೈರ್ನಿತ್ಯಂ ಸೇವ್ಯೋಽಸ್ತಿ ದಿವಿ ಮಾಧವಃ ||**

ತಾ॥ (ಭಗವನ್ತನು ನಿತ್ಯಸೂರಿಗಳೊಡನೆ ಸಂಶ್ಲೇಷಿಸುವಪ್ರಕಾರವನ್ನು ಹೇಳುತ್ತಾರೆ.) ನಿರುಪಾಧಿಕಸ್ವಾಮಿಯಾದ ಭಗವನ್ತನು ಗರುಡಾರೂಢನಾಗಿ ಸಂಚರಿಸುತ್ತ, ದಿವ್ಯತುಲಸೀಮಾಲೆಯಂ ಧರಿಸಿಕೊಂಡು, ನಿತ್ಯಸೂರಿಗಳೊಡನೆ ಸಂಶ್ಲೇಷಿಸಿ ಆನಂದಪಡುತ್ತಾನೆ.

(೨) ಅಮ್ಮಾನಾಯ್ ಪಿನ್ನುಮ್ । ಎಮ್ಮಾಣ್ಬುಮಾನಾನ್,
ವೆಮ್ಮಾವಾಯ್ ಕೀಣ್ಡ । ಸೆಮ್ಮಾಕ್ಕಣ್ಣನೇ.

ಪ್ರ॥ ಅಮ್ಮಾನಾಯ್-ಪರಾತ್ಪರನಾದ ಸ್ವಾಮಿಯಾಗಿದ್ದುಕೊಂಡೂ, ವೆಮ್-ಉಗ್ರವಾದ, ಮಾ-(ಕೇಶಿಯೆಂಬ ರಾಕ್ಷಸರೂಪಿಯಾದ) ಕುದುರೆಯ, ವಾಯ್-ವಕ್ತ್ರವನ್ನು, ಕೀಣ್ಡ-ಸೀಳಿದ, ಸೆಮ್-ಕೆಂಪಾಗಿ, ಮಾ-ವಿಶಾಲವಾಗಿರುವ, ಕಣ್ಣನ್-ಕಣ್ಣುಗಳುಳ್ಳ ಕೃಷ್ಣನು, ಪಿನ್ನುಮ್-ಅದೂಅಲ್ಲದೆ ಮತ್ತೂ, ಎಮ್ ಮಾಣ್ಬುಮ್-ಎಲ್ಲಾ ಅವತಾರಮಾಹಾತ್ಮ್ಯವುಳ್ಳವನಾಗಿಯೂ, ಆನಾನ್-ಆದನು.

( ಸ-ಗಾ-ರ ॥ )—

**ಸರ್ವೇಶ್ವರೋಽಪ್ಯಸೌ ಕೇಶಿಹನ್ತಾ ಕೃಷ್ಣೋಽಬ್ಜಲೋಚನಃ ।**
**ಆಶ್ರಿತಾರ್ಥಂ ಸ್ವಯಂ ಜಾತಸ್ಸರ್ವಮಾಹಾತ್ಮ್ಯಶೋಭಿತಃ ॥**

ತಾ॥ (ಅನ್ತಹ ನಿತ್ಯಸೂರೀಶ್ವರನೇ ಆಶ್ರಿತರಕ್ಷಣಾರ್ಥವಾಗಿ ಅವತರಿಸಿ ತನ್ನ ಮಾಹಾತ್ಮ್ಯವನ್ನು ಪ್ರಕಟಪಡಿಸಿದನೆಂದು ಹೇಳುತ್ತಾರೆ.) ಅನ್ತಹ ಪರಾತ್ಪರನೇ ಕೇಶಿಯೆಂಬ ಕುದುರೆಯವೇಷದಿಂದ ಬಂದ ಅಸುರನ ಬಾಯಿಸೀಳಿ ಆಶ್ರಿತರಕ್ಷಣವಂ ಮಾಡಿದ ಪುಂಡರೀಕಾಕ್ಷನಾದ ಶ್ರೀಕೃಷ್ಣರೂಪಿಯಾಗಿ ಅವತರಿಸಿ ಸರ್ವವಿಧ ಮಾಹಾತ್ಮ್ಯ ಸಮ್ಪನ್ನನಾಗಿಯೂ ಆದನು.

(೩) ಕಣ್ಣಾವಾನೆನ್ರುಮ್ । ಮಣ್ಣೋರ್ ವಿಣ್ಣೋರ್ಕ್ಕು,
ತಣ್ಣಾರ್ ವೇಙ್ಗಡ । ವಿಣ್ಣೋರ್ ವೆರ್ಪನೇ.

ಪ್ರ॥ ಮಣ್ಣೋರ್-ಭೂಲೋಕವಾಸಿಗಳಿಗೂ, ವಿಣ್ಣೋರ್ಕ್ಕು-ಊರ್ಧ್ವಲೋಕವಾಸಿಗಳಿಗೂ, ಎನ್ರುಮ್ - ಎಂದಿಗೂ (ಸರ್ವಕಾಲದಲ್ಲಿಯೂ), ಕಣ್ ಆವಾನ್-ನೇತ್ರಪ್ರಾಯನಾಗಿರುವವನು, ತಣ್ ಆರ್-ಶೈತ್ಯದಿಂದ ಪೂರ್ಣವಾದ, ವೇಙ್ಗಡಮ್-ವೇಙ್ಕಟಾದ್ರಿಯೆಂಬ, ವಿಣ್ಣೋರ್ - ನಿತ್ಯಸೂರಿಸೇವ್ಯವಾದ, ವೆರ್ಪನ್-ಬೆಟ್ಟವನ್ನು (ವಾಸಸ್ಥಾನವಾಗಿ) ಉಳ್ಳವನು.

( ಸ-ಗಾ-ರ || )—

**ದೇವಾನಾಮಪಿ ಮರ್ತ್ಯಾನಾಂ ಚಕ್ಷುರ್ಯೋ ವೇಙ್ಕಟಾಚಲೇ |**
**ಸೂರೀಣಾಮಪಿ ಸೇವ್ಯೋಽಸೌ ಭಾತಿ ರಮ್ಯೇ ಸುಶೀತಲೇ ||**

ತಾ|| (ನಿತ್ಯಸೂರಿಗಳಿಗೂ ಸಂಸಾರಿಗಳಿಗೂ ಸೇವ್ಯನಾಗಿ ವೇಂಕಟಾದ್ರಿಯಲ್ಲಿ ನಿಂತಿದಾನೆಂದು ಭಗವನ್ತನ ಸೌಶೀಲ್ಯಾತಿಶಯವನ್ನು ವರ್ಣಿಸುತ್ತಾರೆ.) ಭೂಲೋಕ ವಾಸಿಗಳಾದ ಸಂಸಾರಿಚೇತನರಿಗೂ ದ್ಯುಲೋಕವಾಸಿಗಳಾದ ನಿತ್ಯಸೂರಿಗಳಿಗೂ ನೇತ್ರಪ್ರಾಯನಾಗಿರುವ ಸರ್ವೇಶ್ವರನೇ ತನ್ನ ಸೌಶೀಲ್ಯಾತಿಶಯದಿಂದ ದಿವ್ಯಸೂರಿ ಸೇವ್ಯವಾದ ಶ್ರೀವೇಂಕಟಾದ್ರಿಯೆಂಬ ತಿರುಪತಿಬೆಟ್ಟವನ್ನು ಆಶ್ರಯಿಸಿ ನಿಂತಿದಾನೆ. (ಸಂಸಾರಿಚೇತನರ ಉಜ್ಜೀವನಕ್ಕಾಗಿ ಈ ಕಾರ್ಯವನ್ನು ಮಾಡಿದನೆಂದು ಕೊಂಡಾಡುತ್ತಾರೆ.)

(೪) ವೆಱ್ಪ್ಪೊನ್ಱೆಡುತ್ತು | ಒಱ್ಕಮಿನ್ಱಿಯೇ,
ನಿಱ್ಕುಮಮ್ಮಾನ್ ಶೀರ್ | ಕಱ್ಪನ್ ವೈಕಲೇ.

ಪ್ರ|| ಒನ್ಱು-ಒಂದು, ವೆಱ್ಪ್ಪು-ಬೆಟ್ಟವನ್ನು, ಎಡುತ್ತು-ಎತ್ತಿ, ಒಱ್ಕಮ್-ಆಯಾಸವು, ಇನ್ಱಿಯೇ-ಇಲ್ಲದಂತೆಯೇ, ಇಱ್ಕುಮ್-ನಿಂತಿರುವ, ಅಮ್ಮಾನ್-ಸ್ವಾಮಿಯ, ಶೀರ್-(ಗೋಗೋಪಸಂರಕ್ಷಣದಿಂದ ಉಂಟಾದ) ಆಪದ್ಬಂಧುವೆಂಬ ಕೀರ್ತಿಯನ್ನು, ವೈಕಲ್-ಸರ್ವಕಾಲದಲ್ಲಿಯೂ, ಕಱ್ಪನ್-(ನಾನು) ಸ್ಮರಿಸಿ ಅನುಸನ್ಧಾನ ಮಾಡುತ್ತಿರುವೆನು.

( ಸ-ಗಾ-ರ || )—

**ಧೃತ್ವಾ ಮಹಾದ್ರಿಮಪ್ಯೇಷ ನಿರಾಯಾಸೋಽಸ್ತಿ ವೀರ್ಯವಾನ್ |**
**ಆಪದ್ಬನ್ಧುರ್ಮಮ ಸ್ವಾಮೀ ! ಸ್ಮರಾಮ್ಯಸ್ಯ ಯಶಸ್ಸದಾ ||**

ತಾ|| (ಆಶ್ರಿತವಿಷಯದಲ್ಲಿ ಆಪದ್ಬನ್ಧುವಾಗಿದಾನೆಂದು ಅವನ ಆರ್ಜವಗುಣವನ್ನು ಸ್ಮರಿಸಿ ಸ್ಮರಿಸಿ ಕೃತಾರ್ಥರಾಗುತ್ತಾರೆ.) ಗೋವುಗಳನ್ನೂ ಗೋಪಾಲಕರನ್ನೂ ಇನ್ದ್ರನ ಶಿಲಾವರ್ಷದಿಂದ ರಕ್ಷಿಸುವುದಕ್ಕಾಗಿ ಗೋವರ್ಧನಗಿರಿಯನ್ನು ಎತ್ತಿದಾಗ್ಯೂ ಆಯಾಸಲೇಶವೂ ಇಲ್ಲದ ವೀರ್ಯವನ್ತನಾದ ಆಪದ್ಬನ್ಧುವಾದ ನನ್ನ ಸ್ವಾಮಿಯ ಗುಣಾತಿಶಯವನ್ನು ಸರ್ವಕಾಲದಲ್ಲಿಯೂ ಸ್ಮರಿಸಿ ಅನುಸನ್ಧಾನ ಮಾಡುತ್ತಿರುವೆನು

(೫) ವೈಕಲುಮ್ ವೆಣ್ಣೆಯ್ | ಕೈಕಲನ್ದುಣ್ಡಾನ್,
ಪೊಯ್ಕಲವಾದು, ಎನ್ | ಮೆಯ್ ಕಲನ್ದಾನೇ.

ಪ್ರ॥ ವೈಕಲುಮ್-ಪ್ರತಿದಿನವೂ, ವೆಣ್ಣೆಯ್-ಬೆಣ್ಣೆಯನ್ನು, ಕೈಕಲನ್ದು-ಕೈಯನ್ನು ಚೆನ್ನಾಗಿ ನೀಡಿ, ಉಣ್ಡವನ್-ಭಕ್ಷಿಸಿದವನು, ಪೊಯ್‌ಕಲವಾದು – ಕಪಟವಿಲ್ಲದೆ ( ಅತ್ಯನ್ತಪ್ರೀತಿಪೂರ್ವಕವಾಗಿಯೇ ), ಎನ್-ನನ್ನ, ಮೆಯ್-(ಈ ಪ್ರಾಕೃತವಾದ) ಶರೀರದಲ್ಲಿಯೇ, ಕಲನ್ದಾನ್-ಒಂದಾಗಿ ಸೇರಿದನು.

( ಸ-ಗಾ-ರ ॥ )—

**ನವನೀತಂ ಸದಾ ಭುಙ್ಕ್ತೇ ಸ್ವಯಂ ಬಾಹೂ ಪ್ರಸಾರ್ಯ ಯಃ ।**
**ಸ ಮೇ ವಪುಷಿ ಸಂಸಕ್ತೋ ಭಾತಿ ಸತ್ಯೋಽನೃತಂ ತ್ಯಜನ್ ॥**

ತಾ॥ (ಇನ್ತಹ ಕೃಷ್ಣನು ನನ್ನ ಈ ದೇಹವನ್ನು ಪ್ರೇಮಾತಿಶಯದಿಂದ ಆಶ್ರಯಿಸಿ ಸಂಶ್ಲೇಷಿಸಿದನೆಂದು ಅವನ ಭಕ್ತವಾತ್ಸಲ್ಯವನ್ನು ಸೂಚಿಸುತ್ತಾರೆ.) ಪ್ರತಿದಿನವೂ ಬೆಣ್ಣೆಯನ್ನು ಕೈನೀಡಿ ಭಕ್ಷಿಸುವ ಸ್ವಭಾವವುಳ್ಳ ಶ್ರೀಕೃಷ್ಣನೇ ಕಾಪಟ್ಯವಿಲ್ಲದೆ ಅತ್ಯನ್ತಪ್ರೀತಿಯಿಂದ ನನ್ನ ಈ ಪ್ರಾಕೃತಶರೀರದಲ್ಲಿಯೇ ಸೇರಿ ಒಂದಾಗಿ ಸಂಶ್ಲೇಷಿಸಿರುತ್ತಾನೆ.

(೭) ಕಲನ್ದೆನ್ನಾವಿ ; ನಲಮ್ ಕೊಳ್ ನಾದನ್,
ಪುಲನ್ ಕೊಳ್ ಮಾಣಾಯ್ | ನಿಲಮ್ ಕೊಣ್ಡಾನೇ.

ಪ್ರ॥ ಕಲನ್ದು-ಒಂದಾಗಿಸೇರಿ, ಎನ್ ಆವಿ-ನನ್ನ ಆತ್ಮಸ್ವರೂಪದ, ನಲಮ್-ಶೇಷತ್ವವೆಂಬ ಗುಣವನ್ನು, ಕೊಳ್-ತನಗೆ ಪ್ರಯೋಜನವಾಗಿ ವಿನಿಯೋಗಿಸಿಕೊಂಡ, ನಾದನ್-ಶೇಷಿಯಾದ ನನ್ನ ಸ್ವಾಮಿಯು, ಪುಲನ್-ಚಕ್ಷುರಾದಿ ಇನ್ದ್ರಿಯಗಳಿಗೆ, ಕೊಳ್-ಆಕರ್ಷಕನಾದ (ರಮಣೀಯನಾದ), ಮಾಣ್ ಆಯ್-ವಾಮನಬ್ರಹ್ಮಚಾರಿವೇಷವುಳ್ಳವನಾಗಿ, ನಿಲಮ್-ಭೂಮಿಯನ್ನು, ಕೊಣ್ಡಾನೇ-ತನ್ನದಾಗಿ ಮಾಡಿಕೊಂಡನಷ್ಟೆ.

( ಸ-ಗಾ-ರ ॥ )—

**ಸಂಶ್ಲಿಷ್ಯ ಮಮ ಚಾತ್ಮಾನಂ ಕೃತ್ವಾ ಸ್ವೀಯಂ ಮಮ ಪ್ರಭುಃ ।**
**ಸರ್ವೇನ್ದ್ರಿಯಹರೋ ಭಾತಿ ವಾಮನೋ ಧರಣೀಂ ಭಜನ್ ॥**

ತಾ॥ (ಹೀಗೆ ಸಂಶ್ಲೇಷಿಸಿ ನನ್ನ ದೇಹವನ್ನುಮಾತ್ರ ವಶೀಕರಿಸಿ ತೃಪ್ತನಾಗದೆ ನನ್ನ ಆತ್ಮಗುಣವಾದ ಶೇಷತ್ವವನ್ನೂ ಕೂಡ ತನಗೇ ಅನನ್ಯಾರ್ಹವಾದ ಪ್ರಯೋಜನವಾಗಿ ಮಾಡಿಕೊಂಡನೆಂದು ಹೇಳುತ್ತಾರೆ.) ಹೀಗೆ ಒಂದಾಗಿಸೇರಿ ನನ್ನ ಶೇಷತ್ವವೆಂಬ ಆತ್ಮಗುಣವನ್ನೂ ತನಗೇ ಪ್ರಯೋಜನವಾಗುವಂತೆ

ಸ್ವೀಕರಿಸಿದ ನನ್ನ ಸ್ವಾಮಿಯೇ ರಮಣೀಯವಾದ ವಾಮನಬ್ರಹ್ಮಚಾರಿವೇಷವನ್ನು ಧರಿಸಿ (ಕಪಟಚೇಷ್ಟೆಗಳಿಂದ) ಭೂಮಿಯನ್ನೆಲ್ಲಾ ತನ್ನದಾಗಿ ಮಾಡಿಕೊಂಡವನು. (ಹೀಗೆಯೇ ನನ್ನ ಆತ್ಮವಸ್ತುವನ್ನೂ ತನ್ನದಾಗಿ ಮಾಡಿಕೊಂಡನೆಂದು ಭಾವವು.)

(೭) ಕೊಣ್ಡಾನೇೞ್ ವಿಡೈ । ಉಣ್ಡಾನೇೞ್ ವೈಯಮ್,
ತಣ್ಡಾಮಮ್ ಶೆಯ್ದೆನ್ । ಎಣ್ಣಾನಾನಾನೇ.

ಪ್ರ॥ ಏೞ್ವಿಡೈ-ಏಳು ವೃಷಭಗಳನ್ನೂ, ಕೊಣ್ಡಾನ್-(ನೀಳಾದೇವಿಯನ್ನು ಹೊಂದುವುದಕ್ಕಾಗಿ) ಜಯಿಸಿದವನು; ಏೞ್ವೈಯಮ್ - ಸಪ್ತಲೋಕಗಳನ್ನೂ, ಉಣ್ಡಾನ್-(ಆಪತ್ಕಾಲದಲ್ಲಿ) ತನ್ನ ಉದರದಲ್ಲಿಟ್ಟು ರಕ್ಷಿಸಿದವನು; ತಣ್-ಸಂಸಾರತಾಪಶಾನ್ತಿಕರವಾದ, ತಾಮಮ್ (ಧಾಮ)-ಪರಮಪದದಲ್ಲಿ ತನಗೆ ಇರುವ ಪ್ರೀತಿಯನ್ನು, ಶೆಯ್ದು-ನನ್ನಲ್ಲಿಮಾಡಿ, ಎನ್-ನನ್ನ, ಎಣ್-ಮನೋರಥಕ್ಕೆ ತಕ್ಕಂತೆ, (ತಾನ್-ತಾನೇ, ಆನಾನ್-ಆದನು ಅನುಭವಿಸಲು ಆರಂಭಿಸಿದನು).

( ಸ-ಗಾ-ರ ॥ )—

**ಸಪ್ತರ್ಷಭಪ್ರಹರ್ತಾಽಸೌ ಸಪ್ತಲೋಕೀಂ ಚ ಭಕ್ಷಯನ್ ।**
**ಪರಮೇ ಧಾಮ್ನಿ ಚ ಸ್ಥಿತ್ವಾ ಮಮ ಚಿತ್ತಾನುಗಃ ಪ್ರಭುಃ ॥**

ತಾ॥ (ಅಷ್ಟುಮಾತ್ರವೇ ಅಲ್ಲದೆ ತನಗೆ ತನ್ನ ಪರಮಪದದಲ್ಲಿರುವ ಪ್ರೀತಿಯನ್ನೆಲ್ಲಾ ನನ್ನಲ್ಲಿಯೇ ಮಾಡಿದನೆಂದು ಅವನ ಆದರಾತಿಶಯವನ್ನು ಹೇಳುತ್ತಾರೆ.) ಸಪ್ತವೃಷಭಗಳನ್ನೂ ಕೊಂದವನಾಗಿಯೂ, ಸಪ್ತಲೋಕಗಳನ್ನೂ ಭಕ್ಷಿಸಿದವನಾಗಿಯೂ ಇರುವ ಸರ್ವೇಶ್ವರನೇ ತನಗೆ ಪರಮಪದದಲ್ಲಿರುವ ಪ್ರೀತ್ಯತಿಶಯವನ್ನು ನನ್ನಲ್ಲಿಮಾಡಿ ನನ್ನ ಮನೋರಥಕ್ಕೆ ಅನುಗುಣವಾಗಿ ತಾನೇ ನನ್ನೊಡನೆ ಸಂಶ್ಲೇಷಿಸಲು ಆರಂಭಿಸಿದನು.

(೮) ಆನಾನಾನಾಯನ್ । ಮೀನೋಡೇನಮುಮ್,
ತಾನಾನಾನೆನ್ನಿಲ್ । ತಾನಾಯ ಶಙ್ಗೇ.

ಪ್ರ॥ ಆನಾಯನ್ - ಪಶುಗಳುಳ್ಳ ಗೋಪಾಲಕನಾಗಿ, ಆನಾನ್ - ಆದನು ; ಮೀನೋಡು - ಮೀನರೂಪದೊಡನೆ, ಏನಮುಮ್ - ವರಾಹರೂಪಿಯಾಗಿಯೂ, ತಾನ್-ತಾನೇ, ಆನಾನ್-ಆದನು ; ಎನ್ನಿಲ್-ಎಂದು ಹೇಳಲು ಆರಂಭಿಸಿದರೆ, ತಾನ್-ಅವನು, ಆಯ-ಮಾಡಿದ ಅವತಾರಗಳು, ಶಙ್ಗೇ-ಶಂಖವೆಂಬ ಮಹಾಸಂಖ್ಯೆಯವರೆಗೂ ಗಣಿಸಲ್ಪಡುವುವು.

( ಸ-ಗಾ-ರ || )—

**ಗೋಪವೇಷಧರೋಽಸ್ಯೇಷ ಸ್ವಯಂ ಮತ್ಸ್ಯವರಾಹವತ್ |**
**ಅವತೀರ್ಣೋಽಭವನ್ಮಹ್ಯಮವತಾರಾ ಅಸಙ್ಖ್ಯಕಾಃ ||**

ತಾ|| (ಆಶ್ರಿತರಿಗಾಗಿ ಅವನು ಮಾಡಿದ ಅವತಾರಗಳು ಎಣಿಸಲಶಕ್ಯವಾದುವು ಗಳೆಂದು ಹೇಳುತ್ತಾರೆ.) ಹೀಗೆ ಗೋಪಾಲವೇಷವನ್ನು ಧರಿಸಿ ನನ್ನೊಡನೆ ಸಂಶ್ಲೇಷಿಸಿದವನೇ, ಮೀನರೂಪಿಯಾಗಿಯೂ, ವರಾಹರೂಪಿಯಾಗಿಯೂ ಇದ್ದವನು–ಎಂದು ಇವನ ಅವತಾರಗಳನ್ನೆಲ್ಲಾ ಗಣನೆಮಾಡಲಾರಂಭಿಸಿದರೆ ಶಂಖವೆಂಬ ಮಹಾ ಸಂಖ್ಯೆಯವರಿಗೂ ಗಣನೆಮಾಡಬೇಕಾಗುವುದು. (ಅವತಾರಗಳು ಅಷ್ಟು ಅಸಂಖ್ಯಾತಗಳೆಂದು ಭಾವವು.)

(೯) ಶಙ್ಗು ಶಕ್ಕರಮ್ | ಅಙ್ಗೈಯಿಲ್ ಕೊಣ್ಡಾನ್
ಎಙ್ಗುಮ್ ತಾನಾಯ | ನಙ್ಗಳ್ ನಾದನೇ.

ಪ್ರ|| ಎಙ್ಗುಮ್ – ಎಲ್ಲಾಪ್ರದೇಶಗಳಲ್ಲೂ, ತಾನ್ ಆಯ–ಅವತಾರದ್ವಾರಾ ತಾನೇ ಪ್ರಕಾಶಿಸಿದ, ನಙ್ಗಳ್–ನಮ್ಮ, ನಾದನೇ–ಸ್ವಾಮಿಯೇ, ಅಮ್–ರಮ್ಯವಾದ, ಕೈಯಿಲ್ – ಹಸ್ತಗಳಲ್ಲಿ, ಶಙ್ಗು ಶಕ್ಕರಮ್ – ಶಂಖಚಕ್ರಗಳನ್ನು, **ಕೊಣ್ಡಾನ್**– ಧರಿಸಿದನು.

( ಸ–ಗಾ–ರ || )—

**ಶಙ್ಖಚಕ್ರಧರೋ ಭಾತಿ ರಮ್ಯೇ ಭುಜಯುಗೇ ಸ್ವಯಮ್ |**
**ಮಮ ಪ್ರಭುರಸೌ ದೀಪ್ರಸ್ಸರ್ವತೋಽಪ್ಯವತಾರತಃ ||**

ತಾ|| (ಹೀಗೆ ಅವತರಿಸುವಾಗ ತನ್ನ ಈಶ್ವರತ್ವಸೂಚಕವಾದ ಶಙ್ಖಚಕ್ರಗಳನ್ನು ಧರಿಸಿಕೊಂಡೇ ಅವತರಿಸುತ್ತಾನೆಂದು ಹೇಳುತ್ತಾರೆ.) ಅವತಾರಗಳಮೂಲಕ ತಾನೇ ಎಲ್ಲಾಪ್ರದೇಶಗಳಲ್ಲೂ ಪ್ರಕಾಶಿಸುತ್ತ, ನಮ್ಮ ಸ್ವಾಮಿಯಾದ ಭಗವಂತನು ರಮಣೀಯವಾದ ತನ್ನ ಹಸ್ತಗಳಲ್ಲಿ ಶಂಖಚಕ್ರಗಳನ್ನು ಧರಿಸಿಕೊಂಡೇ ಅವತರಿಸುತ್ತಾನೆಂದು ಭಾವವು.

(೧೦) ನಾದನ್ ಞಾಲಮ್ ಕೊಳ್ | ಪಾದನ್, ಎನ್ನಮ್ಮಾನ್,
ಓದಮ್ ಪೋಲ್ ಕಿಳರ್ | ವೇದನೀರನೇ.

ಪ್ರ|| ನಾದನ್–ಸರ್ವಲೋಕನಾಥನಾದ, ಞಾಲಮ್–ಸಮಸ್ತ ಪ್ರಪಂಚವನ್ನೂ ಕೊಳ್–ಅಳೆದು ಆಕ್ರಮಿಸಿದ, ಪಾದನ್–ಪಾದಗಳುಳ್ಳವನಾದ, ಎನ್ ಅಮ್ಮಾನ್ –

ನನ್ನ ಸ್ವಾಮಿಯೇ, ಓದನ್ ಪೋಲ್–ಸಮುದ್ರದಂತೆ, ಕಿಳರ್–ಉದ್ಘೋಷಿಸುವ, ವೇದಮ್–ವೇದಗಳಿಂದ ಸ್ತೋತ್ರಮಾಡಲ್ಪಟ್ಟ, ನೀರ್–ಸೌಶೀಲ್ಯಾದಿ ಗುಣಗಳುಳ್ಳವನು.

( ಸ–ಗಾ–ರ ॥ )—

**ಈಶ್ವರಸ್ಸರ್ವಲೋಕಾಂಶ್ಚ ಪಾದೇನಾಕ್ರಮ್ಯ ರಕ್ಷಿತಾ ।**
**ಸುಶೀಲೋ ಭಾತಿ ಮನ್ನಾಥೋ ವೇದಸಾಗರ ಕೀರ್ತಿತಃ ॥**

ತಾ॥ ಸರ್ವಲೋಕೇಶ್ವರನಾಗಿ, ಸಮಸ್ತಪ್ರಪಂಚವನ್ನೂ ತನ್ನ ಪಾದಗಳಿಂದ ಅಳೆದು ಆಕ್ರಮಿಸಿದ ನನ್ನ ಸ್ವಾಮಿಯೇ ಸಮುದ್ರದಂತೆ ಉದ್ಘೋಷಿಸುವ ವೇದಗಳಿಂದ ಶ್ಲಾಘಿಸಲ್ಪಟ್ಟ ಕಲ್ಯಾಣಗುಣಗಳುಳ್ಳವನು. (ಅವನ ಆಶ್ರಿತವಾತ್ಸಲ್ಯ ಸೌಶೀಲ್ಯಾದಿ ಗುಣಗಳನ್ನು ವರ್ಣಿಸಲು ನಮಗೆ ಸಾಧ್ಯವೇ? ಸಾಕ್ಷಾದ್ವೇದಗಳೇ ಸಮುದ್ರದಂತೆ ಉದ್ಘೋಷಿಸುತ್ತ ಅವನ ಗುಣಗಳನ್ನು ವರ್ಣಿಸಬೇಕಾಗಿದೆ ಎಂದು ತಾತ್ಪರ್ಯ).

(೧೧) ನೀರ್ ಪುರೈವಣ್ಣನ್ । ಶೀರ್ ಶಡಕೋಪನ್,
ನೇರ್‌ದಲಾಯಿರತ್ತು । ಓರ್‌ದಲಿವ್ವೈಯೇ.

ಪ್ರ॥ ನೀರ್‌ಪುರೈ – ಸಮುದ್ರನಂತೆ, ವಣ್ಣನ್–ವರ್ಣವುಳ್ಳ (ಗಾಂಭೀರ್ಯಾದಿ ಸ್ವಭಾವವುಳ್ಳ), ಶೀರ್ – ಆರ್ಜವಗುಣವನ್ನು, ಶಡಕೋಪನ್ – ಶ್ರೀ ಶಠಾರಿಯ್ಯು ನೇರ್‌ದಲ್–ಸಾಕ್ಷಾತ್ತಾಗಿ (ಪ್ರೀತಿಯಿಂದ) ಹೇಳಿದ, ಆಯಿರತ್ತು–ಸಹಸ್ರಪದ ಗಳೊಳು, ಇವ್ವೈ–ಈ (ಹತ್ತು) ಪದ್ಯಗಳು, ಓರ್‌ದಲ್–ಶ್ಲಾಘ್ಯವಾದುವುಗಳು.

( ಸ–ಗಾ–ರ ॥ )—

**ರಕ್ಷಿತುರ್ನಿಮ್ನಗಾಃ ವಿಷ್ಣೋರಾರ್ಜವಂ ಕೀರ್ತಯನ್ಮುನಿಃ ।**
**ಶಠಾರಿರಾಹ ಸಾಹಸ್ರಂ ! ತತ್ರೇದಂ ದಶಕಂ ಶುಭಮ್ ॥**

ತಾ॥ ಆಶ್ರಿತವಾತ್ಸಲ್ಯವುಳ್ಳ ಭಗವಂತನ ಆರ್ಜವಗುಣವನ್ನು ಈ ದಶಕದಲ್ಲಿ ಶ್ರೀ ಶಠಾರಿಮುನಿಯು ವರ್ಣಿಸಿರುವುದರಿಂದ ಗಾಥಾಸಹಸ್ರದೊಳು ಇದು ಶ್ಲಾಘ್ಯವಾದುದೆಂದು ಭಾವವು. (ಇದೇ ಫಲಶ್ರುತಿ)

( ದ್ರ–ಉ–ಸಂ ॥ —

**ಕೌಟಿಲ್ಯವತ್ಸು ಕರಣತ್ರಿತಯೇಽಪಿ ಜನ್ತು–**
**ಷ್ವಾತ್ಮೀಯಮೇವ ಕರಣತ್ರಿತಯೈಕರೂಪ್ಯಮ್ ।**
**ಸನ್ದರ್ಶ್ಯ ತಾನಪಿ ಹರಿಸ್ಸ್ವವಶೀಕರೋತೀ–**
**ತ್ಯಾಚಷ್ಟ ಸಾನ್ದ್ರಕರುಣೋ ಮುನಿರಷ್ಟಮೇನ ॥**

--(ದ್ರ-ಉ-ತಾ-ರ ॥)--

**ಸೂರೀಣಾಂ ಸ್ವೈರಸೇವ್ಯೇ ಸ್ವಯಮವತರತಿ ಕ್ಷುದ್ರದಿವ್ಯೈಕನೇತ್ರೇ**
**ಗೋಪಾದ್ಯರ್ಥಂ ಧೃತಾದ್ರೌ ಶ್ರಿತತನುರಸಿಕೇ ವಾಮನೀಭಾವದೃಶ್ಯೇ ।**
**ಸಚ್ಛಿತ್ತಾನನ್ಯವೃತ್ತೌ ವಿಭವಸಮತನೌ ಸ್ವಾಯುಧಾರೂಢಹಸ್ತೇ**
**ನೀಚೋಚ್ಚಗ್ರಾಹ್ಯಪಾದೇ ನಿರುಪಧಿವೃಜುತಾಂ ನೀರವರ್ಣೇ ಜಗಾದ ॥**

**(ಈ ಅಷ್ಟಮದಶಕದ ಸಾರಾಂಶ)**

ಈ ದಶಕದಲ್ಲಿ, ನಿತ್ಯಸೂರಿ ಸಂಸೇವ್ಯನಾದ ಪರಮಪುರುಷನು ಅವತಾರಗಳನ್ನೂ ಕೂಡ ಸಂಸಾರಿಚೇತನೋದ್ಧಾರಕ್ಕಾಗಿಯೇ ಮಾಡಿ ಇವರೊಡನೆ ತನ್ನ ಕರಣತ್ರಯದಿಂದ ಸಂಶ್ಲೇಷಮಾಡಿ, ಇವರನ್ನೂ ಕೂಡ ವಶೀಕರಿಸುತ್ತಾನೆಂದು ಸ್ವಾನುಭವದಿಂದ ಶ್ರೀ ಶಠಾರಿಮುನಿವರ್ಯರು ಭಗವಂತನ ಆರ್ಜವಗುಣವನ್ನು ವರ್ಣಿಸಿರುತ್ತಾರೆ.

---

ಶ್ರೀಃ

# ಪ್ರಥಮಶತಕದಲ್ಲಿ—ನವಮದಶಕ.

(ಇವೈಯುಮವೈಯುಮುವೈಯುಮ್-)

(ಈ ದಶಕದಲ್ಲಿ – ಶ್ರೀ ಶಠಾರಿಮುನಿವರ್ಯರು ಭಗವಂತನು ತಮ್ಮೊಡನೆ ಮಾಡಿದ ಸರ್ವಾವಯವಸಂಶ್ಲೇಷವನ್ನು ವರ್ಣಿಸುತ್ತಾರೆ. ಇದೇ ಭಗವಂತನ ಸಾತ್ಮ್ಯಭೋಗಪ್ರದತ್ವವೆಂಬ ಗುಣವು)

---

(೧) ಇವೈಯುಮವೈಯುಮುವೈಯುಮಿವರುಮವರು
ಮುವರುಮ್,
ಯವೈಯುಮ್ ಯವರುಮ್ ತನ್ನುಳ್ಳೇ ಯಾಕಿಯು
ಮಾಕ್ಕಿಯುಮ್ ಕಾಕ್ಕುಮ್,
ಅವೈಯುಳ್ ತನಿಮುದಲೆಮ್ಮಾನ್ ಕಣ್ಣಪಿರಾನೆನ್ನಮುದಮ್,
ಶುವೈಯನ್ ತಿರುವಿನ್ ಮಣಾಳನೆನ್ನುಡೈ ಚ್ಚೂೞಲುಳಾನೇ.

ಪ್ರ|| ಇವ್ವೈಯುಮ್-ಸಮೀಪದಲ್ಲಿರುವ ವಸ್ತುಗಳೂ, ಅವ್ವೈಯುಮ್-ದೂರದಲ್ಲಿರುವ ವಸ್ತುಗಳೂ, ಉವ್ವೈಯುಮ್-ನಡುವೆ ಇರುವ ವಸ್ತುಗಳೂ, ಇವರುಮ್-ಸಮೀಪದಲ್ಲಿರುವ ಚೇತನರೂ, ಅವರುಮ್-ದೂರದಲ್ಲಿರುವ ಚೇತನರೂ, ಉವರುಮ್-ನಡುವೆ ಇರುವ ಚೇತನರೂ, ಯವ್ವೈಯುಮ್-ಸಕಲ ಅಚೇತನಗಳೂ, ಯವರುಮ್-ಸಕಲ ಚೇತನರೂ, ತನ್ನುಳ್ಳೇ-(ಪ್ರಳಯಕಾಲದಲ್ಲಿ) ತನ್ನೊಳಗೇ, ಆಕಿಯುಮ್-ಇರುವಂತೆ ಇಟ್ಟುಕೊಂಡೂ, ಆಕ್ಕಿಯುಮ್-(ಪುನಃ ಅವುಗಳನ್ನೆಲ್ಲಾ) ಸೃಷ್ಟಿಮಾಡಿಯೂ, ಕಾಕ್ಕುಮ್-ರಕ್ಷಿಸುವ, ಅವ್ವೈಯುಳ್-ಅವುಗಳೊಳೆಲ್ಲಾ (ಅನ್ತರ್ಯಾಮಿಯಾಗಿ ನಿಂತಿರುವ), ತನಿಮುದಲ್-ಅಸದೃಶನಾಗಿ ಕಾರಣವಸ್ತುವಾಗಿರುವ, ಎಮ್ಮಾನ್-ನನ್ನ ಸ್ವಾಮಿಯು, ಕಣ್ಣಪಿರಾನ್-ಕೃಷ್ಣರೂಪಿಯಾದ ಉಪಕಾರಕನೂ, ಎನ್ ಅಮುದಮ್-ನನಗೆ ಅಮೃತಸ್ವರೂಪಿಯಾದವನೂ, ಸುವೈಯನ್-ರಸಿಕಾಗ್ರಗಣ್ಯನೂ, ತಿರುವಿನ್ಮಣಾಳನ್-ಲಕ್ಷ್ಮೀದೇವಿಗೆ ಪತಿಯಾದವನೂ, (ಇಂತಹ ಸರ್ವೇಶ್ವರನೇ), ಎನ್ನುಡೈಚೂಳಲ್-ನನ್ನ ಸಮೀಪದಲ್ಲಿ (ಬಂದು ಸೇರಿ), ಉಳಾನ್-ಇರುತ್ತಾನೆ.

( ಸ-ಗಾ-ರ || )—

> **ಸರ್ವಾಚೇತನಸನ್ತತಿಂ ನಿಕಟತೋಽದೂರೇಽಪಿ ದೂರೇ ಸ್ಥಿತಾ-**
> **ಮೇವಂ ಚೇತನಸನ್ತತಿಂ ಚ ಸಕಲಾಂ ಸ್ವಸ್ಮಿನ್ ವಿಧಾಯಾಪಿ ಯಃ |**
> **ಸೃಷ್ಟ್ವಾಽಥಾಪಿ ಪುನಸ್ಸ ರಕ್ಷಣಪರಸ್ಸರ್ವಾನ್ತರಾತ್ಮಾ ಸ್ವಯಂ**
> **ಸ್ವಾಮೀ ಕೃಷ್ಣವಿಭುರ್ಮಮಾಮೃತರಸಶ್ರೀಶೋಽಸ್ತಿ ಚಾಗ್ರೇ ಮಮ ||**

ತಾ|| (ಸರ್ವಸ್ಮಾತ್ಪರನಾದ ಭಗವನ್ತನೇ ಸರ್ವಸುಲಭನಾಗಿ ನನ್ನ ಸಮೀಪದಲ್ಲಿದ್ದುಕೊಂಡು ನನಗೆ ಭೋಗ್ಯತಮನಾಗಿದಾನೆಂದು ಹೇಳುತ್ತಾರೆ). ಸಮೀಪದಲ್ಲೂ ದೂರದಲ್ಲೂ, ನಡುವೆಯೂ ಇರುವ ಸಕಲ ಚಿದಚಿದ್ವರ್ಗಗಳೂ ತನ್ನೊಳಗೇ ಇರುವಂತೆ ಪ್ರಳಯಕಾಲದಲ್ಲಿ ರಕ್ಷಿಸಿ, ಪುನಃ ಸೃಷ್ಟಿಮಾಡಿ ಅವುಗಳನ್ನೆಲ್ಲಾ ಪರಿಪಾಲಿಸುತ್ತ, ಅನ್ತರ್ಯಾಮಿಯಾಗಿಯೂ ನಿಂತು, ಸರ್ವಕಾರಣಭೂತನಾಗಿರುವ ಪರಾತ್ಪರನೇ, ನನ್ನ ಸ್ವಾಮಿಯಾಗಿ, ಶ್ರೀ ಕೃಷ್ಣರೂಪಿಯಾಗಿ, ನನಗೆ ಅಮೃತದಂತೆ ಭೋಗ್ಯತಮನಾಗಿಯೂ, ರಸಿಕಾಗ್ರಗಣ್ಯನಾಗಿಯೂ, ಶ್ರಿಯಃಪತಿಯಾಗಿಯೂ ಪ್ರಕಾಶಿಸುತ್ತ, ನನ್ನ ಸಮೀಪದಲ್ಲಿಯೇ ಇದ್ದುಕೊಂಡು ನನ್ನನ್ನು ಬಿಡದೆ ಇರುತ್ತಾನೆ.

(೨) ಶೂೞಲ್ ಪಲಪಲ ವಲ್ಲಾನ್, ತೊಲ್ಲೈಯಮ್
ಕಾಲತ್ತುಲಕ್ಕೈ,
ಕೇೞಲೊನ್ರಾಕಿ ಯಿಡನ್ದ ಕೇಶವನೆನ್ನುಡೈಯಮ್ಮಾನ್,
ವೇೞ ಮರುಪ್ಪೈ ಯೊಶಿತ್ತಾನ್ ವಿಣ್ಣವರ್ಕ್ಕೆಣ್ಣಲರಿಯಾನ್
ಆೞ ನೆಡುಮ್ ಕಡಲ್ ಶೇರ್ನ್ದಾನವನೆನ್ನರುಕಲಿಲಾನೇ.

ಪ್ರ|| ಶೂೞಲ್-ಅವತಾರಗಳನ್ನು, ಪಲಪಲ-ಅನೇಕಾನೇಕವಾಗಿ, ವಲ್ಲಾನ್-ಮಾಡಬಲ್ಲವನು, ತೊಲ್ಲೈ-ಪೂರ್ವಕಲ್ಪದ, ಅಮ್ ಕಾಲತ್ತು-ಅಂದಿನಕಾಲದಲ್ಲಿ (ವರಾಹಕಲ್ಪಾದಿಯಲ್ಲಿ), ಉಲಕ್ಕೈ - ಭೂಮಿಯನ್ನು, ಒನ್ರು - ಅದ್ವಿತೀಯವಾದ, ಕೇೞಲ್-ವರಾಹರೂಪಿಯಾಗಿ, ಆಕಿ-ಆಗಿ, ಇಡನ್ದ - ತನ್ನ ಕೋರೆಯಿಂದ ಎತ್ತಿದ, ಕೇಶವನ್ - (ಪ್ರಳಯಜಲದಲ್ಲಿ ಸಿಕ್ತವಾದ ಕೂದಲುಗಳುಳ್ಳ) ಕೇಶವನು, ಎನ್ನುಡೈ ಅಮ್ಮಾನ್-ನನ್ನ ಸ್ವಾಮಿಯು, ವೇೞಮ್-ಕುವಲಯಾಪೀಡವೆಂಬ ಆನೆಯ, ಮರುಪ್ಪೈ ಒಶಿತ್ತಾನ್ - ಕೊಂಬನ್ನು ಮುರಿದವನಾಗಿ, ವಿಣ್ಣವರ್ಕ್ಕು-ದೇವತೆಗಳಿಗೂ, ಎಣ್ಣಲ್ - ಚಿನ್ತಿಸಲು, ಅರಿಯಾನ್ - ಅಶಕ್ಯನಾಗಿ, ಆೞಮ್ - ಅಗಾಧವಾದ, ನೆಡುಮ್-ವಿಶಾಲವಾದ, ಕಡಲ್-ಸಮುದ್ರದಲ್ಲಿ, ಶೇರ್ನ್ದಾನ್-ಶಯನಮಾಡಿದವನಾಗಿ, ಅವನೇ - ಆ ಸರ್ವೇಶ್ವರನೇ, ಎನ್ ಅರುಕಲಿಲಾನ್ - ನನ್ನ ಪಾರ್ಶ್ವದಲ್ಲಿರುವವನು.

( ಸ-ಗಾ-ರ || )—

ಕುರ್ವಂಸ್ತ್ವಾಮವತಾರಸನ್ತತಿಮಪಿ ಸ್ವೇಚ್ಛಾಬಲಾತ್ಪ್ರಾಕ್ತನೇ
ಕಾಲೇ ದಿವ್ಯವರಾಹಮೂರ್ತಿರವನೀಮುದ್ಧೃತ್ಯ ಯಃ ಕೇಶವಃ |
ಮನ್ನಾಥಃ ಕಿಲ ಹಸ್ತಿಶೃಙ್ಗಭಿದಸೌ ದೇವೈರವೇದ್ಯಸ್ಸ್ವಯಂ
ಗಮ್ಭೀರಾಮೃತವಾರಿಧೌ ಮಹತಿ ಯಶ್ಶೇತೇ ಸ ಪಾರ್ಶ್ವೇಽಸ್ತಿ ಮೇ ||

ತಾ|| (ಹೀಗೆ ಸಮೀಪವರ್ತಿಯಾಗಿದ್ದವನು ಈಗ ನನ್ನ ಪಕ್ಕದಲ್ಲಿಯೇ ಬಂದು ನಿಂತಿದಾನೆಂದು ಹೇಳುತ್ತಾರೆ.) ಅನೇಕಾನೇಕಾವತಾರಗಳನ್ನು ಮಾಡಬಲ್ಲವನಾದ ಸರ್ವೇಶ್ವರನು ವರಾಹರೂಪಿಯಾಗಿ ಪೂರ್ವಕಲ್ಪದಲ್ಲಿ ಅವತರಿಸಿ ಭೂಮಿಯನ್ನು ಉದ್ಧರಿಸಿ, ಕೃಷ್ಣಾವತಾರದಲ್ಲಿ ಕುವಲಯಾಪೀಡವೆಂಬ ಆನೆಯ ಕೊಂಬನ್ನು ಮುರಿದು, ದೇವತೆಗಳಿಗೂ ಅಚಿನ್ತ್ಯವಾದ ಮಹಿಮೆಯುಳ್ಳವನಾಗಿ, ಕ್ಷೀರಾರ್ಣವಶಾಯಿಯಾಗಿಯೂ ಇರುವ ಅವನೇ ನನ್ನ ಸ್ವಾಮಿಯಾಗಿ ಈಗ ನನ್ನ ಪಾರ್ಶ್ವದಲ್ಲಿ ನಿಂತಿದಾನೆ.

(೩) ಅರುಕಲಿಲಾಯ ಪೆರುಂಶೀರಮರರ್ಕಳಾದಿ ಮುದಲ್ವನ್,
ಕರುಕಿಯ ನೀಲನನ್ಮೇನಿ ವಣ್ಣನ್ ಶೆನ್ದಾಮರೈಕ್ಕಣ್ಣನ್,
ಪೊರುಶಿಱೈಪ್ಪುಳ್ಳುವನ್ದೇಱುಮ್ ಪೂಮಕಳಾರ್ ತನಿಕ್ಕೇಳ್ವನ್
ಒರುಕದಿಯಿನ್ ಶುವೈ ತನ್ದಿಟ್ಟೊೞಿವಿಲನೆನ್ನೋಡುಡನೇ.

ಪ್ರ|| ಅರುಕಲಿಲ್–ನ್ಯೂನತೆಯಿಲ್ಲದ, ಆಯ–ನಿತ್ಯವಾದ, ಪೆರುಮ್–ಅಪರಿಚ್ಛಿನ್ನವಾದ, ಶೀರ್–ಕಲ್ಯಾಣಗುಣಗಳುಳ್ಳ, ಅಮರರ್ಕಳ್ – ನಿತ್ಯಸೂರಿಗಳಿಗೆ, ಆದಿ–ಕಾರಣಭೂತನಾದ, ಮುದಲ್ವನ್–ಪ್ರಧಾನಪುರುಷನು, ಕರುಕಿಯ–ಕರೀ, ನೀಲ–ನೀಲರತ್ನದಂತೆ, ನಲ್‌ಮೇನಿವಣ್ಣನ್–ರಮ್ಯವಾದ ದೇಹಕಾನ್ತಿಯುಳ್ಳವನು, ಶೆನ್ದಾಮರೈಕ್ಕಣ್ಣನ್–ಕೆಂದಾವರೆಯಂತೆ ಇರುವ ಕಣ್ಣುಗಳುಳ್ಳವನು, ಪೊರು–ಸೇರಿಕೊಂಡಿರುವ, ಶಿಱೈ–ರೆಕ್ಕೆಗಳುಳ್ಳ, ಪುಳ್–ಗರುಡಪಕ್ಷಿಯನ್ನು, ಉವನ್ದು–ಪ್ರೀತಿಯೊಡನೆ, ಏಱುಮ್–ಹತ್ತುವವನಾದ, ಪೂಮಕಳಾರ್–ಪದ್ಮೋದ್ಭವೆಯಾದ ಲಕ್ಷ್ಮೀದೇವಿಗೆ, ತನಿಕ್ಕೇಳ್ವನ್–ಅನನ್ಯಾಧೃಶನಾದ ನಾಯಕನಾದವನು, ಎನ್ನೋಡು ಉಡನೇ–ನನ್ನೊಡನೆ ಸೇರಿ ಸಂಶ್ಲೇಷಿಸಿ, ಒರುಕದಿಯಿನ್ – ಒಂದು ಮಾರ್ಗದಲ್ಲಿರುವ, ಶುವೈ–ರಸವನ್ನು (ಭೋಗ್ಯತೆಯನ್ನು), ತಂದಿಟ್ಟು–ಉಂಟುಮಾಡಿ, ಒೞಿವು ಇಲನ್–ಬಿಟ್ಟು ಹೋಗದೆ ಇರುತ್ತಾನೆ.

( ಸ–ಗಾ–ರ || ) —

ನಿತ್ಯಾನನ್ತಸುನಿರ್ಮಲಾತ್ಮವಿಭವಸ್ಸೂರೀನ್ದ್ರನಾಥಸ್ಸ್ವಯಂ
ಚಾದಿರ್ನೀಲಮಣಿಪ್ರಭಸ್ಸುರುಚಿರಾಮ್ಭೋಜಾಕ್ಷಿಯುಗ್ಮೋ ಹರಿಃ |
ದೀವ್ಯತ್ಪಕ್ಷಗರುತ್ಮದಾಶ್ರಯ ಇಹ ಶ್ರೀ ವಲ್ಲಭೋಽಪ್ಯಚ್ಯುತ–
ಸ್ಸಂಶ್ಲಿಷ್ಯಾದ್ಯ ಮಯಾ ಸಹಾದ್ಭುತರಸಂ ದತ್ವಾ ನ ಮಾನ್ತ್ಯಜೇತ್||

ತಾ||(ನನ್ನ ಪಾರ್ಶ್ವದಲ್ಲಿ ನಿಂತು ಇರುವುದು ಮಾತ್ರವಲ್ಲದೆ ನನ್ನೊಡನೆ ಸರ್ವಪ್ರಕಾರಗಳಲ್ಲಿಯೂ ಸಂಶ್ಲೇಷಿಸಿ ರಸಾನುಭವವನ್ನುಂಟುಮಾಡುತ್ತಿದಾನೆಂದು ಹೇಳುತ್ತಾರೆ.) ನಿರ್ದೋಷನಾದ ಸಮಸ್ತ ಕಲ್ಯಾಣಗುಣಗಳಿಗೂ ಆಶ್ರಯನಾಗಿ, ನಿತ್ಯಸೂರೀಶ್ವರನಾಗಿ, ನೀಲಮಣಿವರ್ಣನಾಗಿ, ರಕ್ತಾಮ್ಭೋಜನೇತ್ರನಾಗಿ, ಗರುಡಾರೂಢನಾಗಿರುವ ಶ್ರೀವಲ್ಲಭನೇ, ಈಗ ನನ್ನೊಡನೆ ಸರ್ವ ಪ್ರಕಾರಗಳಲ್ಲೂ ಬಿಡದೆ ಸಂಶ್ಲೇಷಿಸುತ್ತಾ ನನ್ನನ್ನು ಆನನ್ದಪಡಿಸುತ್ತಿದಾನೆ.

(೪) ಉಡನಮರ್ ಕಾದಲ್ ಮಕಳಿರ್ ತಿರುಮಕಳ್ ಮಣ್ಮ
ಕಳಾಯರ್
ಮಡಮಕಳ್, ಎನ್ರಿವರ್ ಮೂವರಾಳುಮುಲಕಮುಮ್ ಮೂನ್ರೇ
ಉಡನವೈಯೊಕ್ಕ ವಿಳುಙ್ಗಿ ಯಾಲಿಲೈ ಚ್ಚೇರ್ನ್ದವನೆಮ್ಮಾನ್,
ಕಡಲ್‌ಮಲಿ ಮಾಯಪ್ಪೆರುಮಾನ್ ಕಣ್ಣನೆನ್ನೊಕ್ಕಲೈಯಾನೇ.

ಪ್ರ॥ ಉಡನ್-ಕೂಡಿ ಇರುತ್ತ, ಅಮರ್-ಒಂದಾಗಿ ಸೇರಿ ಇರಲು, ಕಾದಲ್-ಆಶೆಯುಳ್ಳ, ಮಕಳಿರ್-ಪತ್ನಿಯರಾದ, ತಿರುಮಕಳ್ - ಶ್ರೀದೇವಿಯೂ, ಮಣ್ ಮಕಳ್-ಭೂದೇವಿಯೂ, ಆಯರ್‌ಮಡಮಕಳ್-ನೀಳಾದೇವಿಯೂ(ಗೋಪಕುಲದಲ್ಲಿ ಹುಟ್ಟಿ ದಿವ್ಯ ಗುಣಸಮ್ಪನ್ನೆಯಾದ ನಪ್ಪಿನ್ನೈ ಯೆಂಬ ನೀಳೆಯೂ), ಎನ್ರು-ಎಂದು ಪ್ರಸಿದ್ಧರಾದ, ಇವರ್‌ಮೂವರ್-ಈಮೂವರೂ, ಆಳುಮ್-ತನ್ನಿಂದ ಆಳಲ್ಪಡುವ, ಉಲಕಮುಮ್-ಲೋಕಗಳೂ, ಮೂನ್ರೇ-ಮೂರು ಪ್ರಕಾರವಾಗಿಯೇ ಇವೆ (ಭೂಃ, ಭುವಃ, ಸುವಃ—ಎಂಬೀ ಕೃತಕಲೋಕವೂ, ಮಹಃ-ಎಂಬ ಕೃತಕಾ ಕೃತಕಲೋಕವೂ, ಜನಃ, ತಪಃ, ಸತ್ಯಮ್-ಎಂಬೀ ಅಕೃತಕಲೋಕವೂ — ಈಪ್ರಕಾರ ಮೂರು ವಿಧವಾಗಿಯೇ ಇವೆ). ಅನ್ರೈ-ಅವುಗಳನ್ನು, ಉಡನ್-ತಾರತಮ್ಯವಿಲ್ಲದೆ ಎಲ್ಲವನ್ನೂ, ಒಕ್ಕವಿಳುಙ್ಗಿ-ಏಕಕಾಲದಲ್ಲಿಯೇ (ಪ್ರಳಯದಲ್ಲಿ) ಭಕ್ಷಿಸಿ, ಆಲಿಲೈ-ವಟಪತ್ರದಲ್ಲಿ (ಆಲದ ಎಲೆಯಲ್ಲಿ), ಶೇರ್ನ್ದವನ್-ಸೇರಿ ಶಯನಮಾಡುವವನಾಗಿ, ಎಮ್ಮಾನ್-ನನ್ನ ಸ್ವಾಮಿಯು, ಕಡಲ್-ಕ್ಷೀರಸಮುದ್ರದಲ್ಲಿ, ಮಲಿ-ಶಯನಮಾಡಿ, ಅದನ್ನು ಅಭಿವೃದ್ಧಿಪಡಿಸುವವನಾಗಿ, ಮಾಯಮ್-ಆಶ್ಚರ್ಯಗುಣ ಚೇಷ್ಟಿತಗಳಿಂದ, ಪೆರುಮಾನ್-ನಿರವಧಿಕಮಹಿಮೆಯುಳ್ಳವನಾದ, ಕಣ್ಣನ್-ಶ್ರೀ ಕೃಷ್ಣನು, ಎನ್ ಒಕ್ಕಲೈಯಾನೇ-(ಯಶೋದೆಯ ಮಗ್ಗುಲಲ್ಲಿರುವಂತೆ) ನನ್ನ ಪಾರ್ಶ್ವದಲ್ಲೇ(ಮಗ್ಗುಲಲ್ಲೇ) ಇರುತ್ತಾನೆ.

( ಸ-ಗಾ-ರ ॥ )—

ಸಂಶ್ಲೇಷೈಕರಸಾಶ್ಚ ಯಸ್ಯ ಕಮಲಾ ಭೂಮಿಶ್ಚ ನೀಳಾ ಸ್ವಯಂ
ಯಸ್ಯಾಸೀದುದರೇ ಜಗತ್ತ್ರಯಮಪಿ ! ಸ್ವಾಮಿನಾ ಶಯಾನೋಽಮ್ಬುಧೌ।
ಮಾಯಿನಾ ಯೋ ವಟವೃಕ್ಷಪತ್ರಶಯಿಕಃ ಕೃಷ್ಣಃ ಪ್ರಭುಶ್ಶ್ರೀಧರ-
ಸ್ಸೋಽಯಂ ಭಾತಿ ಹಿ ಪಾರ್ಶ್ವಗೋ ಮಮ ತಥಾ ನಿತ್ಯಂ ಯಶೋದಾ
ಸುತಃ ॥

ತಾ॥ (ಅನ್ನುಹ ಸರ್ವೇಶ್ವರನು ಯಶೋದೆಯ ಮಗ್ಗುಲಲ್ಲಿ ಹೇಗೆ ಇರುತ್ತಿದ್ದನೋ ಹಾಗೆ ನನ್ನ ಮಗ್ಗುಲಲ್ಲಿ ಈಗ ಸೇರಿಕೊಂಡಿದಾನೆಂದು ಹೇಳುತ್ತಾರೆ). ಶ್ರೀ ಭೂ ನೀಳಾದೇವಿಗಳು ಮೂವರೂ, ಮೂರು ಲೋಕಗಳೂ ಮುಂತಾದುವುಗಳನ್ನೆಲ್ಲಾ ಒಂದೇಸಲ ನುಂಗಿ ವಟಪತ್ರಶಾಯಿಯಾಗಿದ್ದವನೇ ನನ್ನ ಒಡೆಯನಾಗಿ, ಕ್ಷೀರಾರ್ಣವಶಾಯಿಯಾಗಿಯೂ, ನಿರವಧಿಕಮಹಿಮೆಯುಳ್ಳವನಾಗಿಯೂ, ಶ್ರೀಕೃಷ್ಣರೂಪಿಯಾಗಿಯೂ ಬಂದು ಈಗ ನನ್ನ ಮಗ್ಗುಲಲ್ಲಿ ಸೇರಿಕೊಂಡಿದಾನೆ.

(೨೧) ಒಕ್ಕಲೈ ವೈತ್ತು ಮುಲೈಪ್ಪಾಲುಣ್ಣೆನ್ರು ತನ್ದಿಡವಾಙ್ಗಿ,
ಶೆಕ್ಕಮ್ ಶೆಕವನ್ರವಳ್ ಪಾಲುಯಿರ್ ಶೆಕ ವುಣ್ಡ ಪೆರುಮಾನ್,
ನಕ್ಕಪಿರಾನೋಡಯನುಮಿನ್ದಿರನುಮ್ ಮುದಲಾಕ,
ಒಕ್ಕವುಮ್ ತೋಟ್ರಿಯ ಈಶನ್ ಮಾಯನೆನ್ನೆಞ್ಜಿನುಳಾನೇ.

ಪ್ರ॥ ನಕ್ಕಪಿರಾನೋಡು – (ನಗ್ನನಾಗಿ ಈಶ್ವರನೆಂದು ಹೆಸರುಳ್ಳ) ರುದ್ರನೊಡನೆ, ಅಯನುಮ್–ಅಜನೆಂದು (ಅಯೋನಿಜನೆಂದು) ಪ್ರಸಿದ್ಧನಾದ ಬ್ರಹ್ಮನೂ ಇನ್ದಿರನುಮ್–(ಪರಮೈಶ್ವರ್ಯವಿಶಿಷ್ಟನೆಂದು ತನ್ನನ್ನು ಭಾವಿಸಿಕೊಂಡಿರುವ) ಇಂದ್ರನೂ, ಮುದಲಾಕವುಮ್–ಮೊದಲಾದ ಸಮಸ್ತ ಪದಾರ್ಥಗಳನ್ನೂ, ಒಕ್ಕ–ಒಂದೆ ಸಲಕ್ಕೆ, ತೋಟ್ರಿಯ–ಉದ್ಭವಿಸುವಂತೆ ಮಾಡಿದ, ಈಶನ್–ಸರ್ವೇಶ್ವರನಾದ ಭಗವನ್ತನು, ಒಕ್ಕಲೈವೈತ್ತು–(ಯಶೋದೆಯಂತೆ) ಸೊಂಟದಲ್ಲಿಟ್ಟುಕೊಂಡು, ಮುಲೈಪ್ಪಾಲುಣ್ಣೆನ್ರು–ಸ್ತನ್ಯಪಾನಮಂ ಮಾಡೆಂದು, ತನ್ದಿಡ – (ಸ್ತನವನ್ನು ತ್ವರೆಯಿಂದ ಬಾಯಲ್ಲಿ) ಇಡಲು, ವಾಙ್ಗಿ–(ಅದನ್ನು) ಸ್ವೀಕರಿಸಿ ಹಿಡಿದುಕೊಂಡು, ಶೆಕ್ಕಮ್–(ಆ ಪೂತನೆಯ) ದುಷ್ಟಭಾವವು, ಶೆಕ–(ಅವಳೊಡನೆ) ನಷ್ಟವಾಗುವಂತೆ, ಅನ್ರು–ಆದಿನ, ಅವಳ್ ಪಾಲ್–ಅವಳ (ವಿಷಮಿಶ್ರವಾದ) ಹಾಲನ್ನೂ, ಉಯಿರ್–ಪ್ರಾಣವನ್ನೂ, ಶೆಕ–ನಾಶಹೊಂದುವಂತೆ, ಉಣ್ಡ–ಆಕರ್ಷಿಸಿ ಭಕ್ಷಿಸಿದ, ಪೆರುಮಾನ್–ಸ್ವಾಮಿಯಾದ, ಮಾಯನ್–ಆಶ್ಚರ್ಯಭೂತನಾದವನು, ಎನ್–ನನ್ನ, ನೆಞ್ಜಿನುಳಾನ್–ಹೃದಯದೊಳಗೆ ಪ್ರವಿಷ್ಟನಾಗಿದಾನೆ.

( ಸ–ಗಾ–ರ ॥ )—

ರುದ್ರಶ್ಚಾಪಿ ಚತುರ್ಮುಖಶ್ಶತಮುಖಸ್ಸರ್ವೇಽಪಿ ಚೋತ್ಪಾದಿತಾ
ಯೇನೈಕೇನ ಸ ಏವ ಮಾಯಿಕಜನಯಾಂ ತಾಂ ಸ್ತನ್ಯದಾಂ ಘಾತಯೀತ್ ।
ತಸ್ಯಾ ಭರ್ಜನಶಕ್ತಿಕಂ ಸವಿಷಮಸೂನ್ ಸ್ತನ್ಯಂ ಪಿಬೀಯ ಸ್ವಯಂ
ಸ್ವಾಮೀ ಚಾದ್ಭುತವೈಭವಸ್ಸ ಭಗವಾನಾಸ್ತೇ ಹೃದಬ್ಜೇ ಮಮ ॥

ತಾ॥ (ಸರ್ವದೇವಾದಿ ಸೃಷ್ಟಿಯನ್ನೂ ಮಾಡಿ ವಿರೋಧಿನಿರಸನಶೀಲನಾಗಿಯೂ ಇರುವ ಶ್ರೀ ಕೃಷ್ಣನೇ ನನ್ನ ಹೃದಯದೊಳು ಈಗ ಪ್ರವಿಷ್ಟನಾಗಿದಾನೆಂದು ಹೇಳುತ್ತಾರೆ.) ಬ್ರಹ್ಮರುದ್ರೇಂದ್ರಾದಿ ಸಮಸ್ತ ಜಗತ್ಸೃಷ್ಟಿಯನ್ನೂ ಮಾಡಿದ ಭಗವನ್ತನೇ ಪೂತನಾಸ್ತನ್ಯಪಾನವಂ ಮಾಡಿ ಅವಳ ದುಷ್ಟಭಾವವು ಅವಳೊಡನೆ ನಷ್ಟವಾಗುವಂತೆ ಅವಳ ಪ್ರಾಣವನ್ನು ಅಪಹರಿಸಿದ ಅದ್ಭುತಚೇಷ್ಟಿತನಾದ ನನ್ನ ಸ್ವಾಮಿಯಾಗಿ (ಶ್ರೀಕೃಷ್ಣರೂಪಿಯಾಗಿ) ಈಗ ನನ್ನ ಹೃದಯದೊಳು ಪ್ರವಿಷ್ಟನಾಗಿದಾನೆ.

(೭) ಮಾಯನೆನ್ನೆಂಜಿನುಳ್ಳಾನ್ ಮಱ್ಱುಮ್ ಯವರ್ಕ್ಕು
ಮದುವೇ,
ಕಾಯಮುಮ್ ಶೀವನುಮ್ ತಾನೇ ಕಾಲುಮೆರಿಯುಮವನೇ,
ಶೇಯನಣಿಯನ್ ಯವರ್ಕ್ಕುಮ್ ಶಿನ್ದೈಕ್ಕುಮ್ ಗೋಚರ
ಮಲ್ಲನ್,
ತೂಯನ್ ತುಯಕ್ಕನ್ ಮಯಕ್ಕನ್ನೆನ್ನುಡೈ ತೋಳಿಣೈ
ಯಾನೇ.

ಪ್ರ॥ ಮಾಯನ್-ಆಶ್ಚರ್ಯಭೂತನಾದವನೇ, ಎನ್ನೆಂಜಿನುಳ್ಳಾನ್-ನನ್ನ ಮನಸ್ಸಿನಲ್ಲಿರುವವನು. ಮಱ್ಱುಮ್ ಯವರ್ಕ್ಕುಮ್-ಮಿಕ್ಕ ಎಲ್ಲರಿಗೂ, ಅದುವೇ-ಹಾಗೆಯೇ ಇರುತ್ತಾನೋ ? (ಇಲ್ಲ.) ಕಾಯಮುಮ್-ಶರೀರವೂ, ಶೀವನುಮ್-ಜೀವನೂ, ತಾನೇ-ತಾನೇ, ಕಾಲುಮ್-ವಾಯುವೂ, ಎರಿಯುಮ್-ಅಗ್ನಿಯೂ, ಅವನೇ-ಅವನೇ. ಶೇಯನ್-(ಅನಾಶ್ರಿತರಿಂಗೆ) ದೂರಸ್ಥನಾಗಿಯೂ, ಅಣಿಯನ್-(ಆಶ್ರಿತರಿಗೆ) ಸಮೀಪಸ್ಥನಾಗಿಯೂ, ಯವರ್ಕ್ಕುಮ್-ಎಂತಹ ಜ್ಞಾನಾಧಿಕರಿಗೂ, ಶಿನ್ದೈಕ್ಕುಮ್-ಚಿನ್ತಿಸುವುದಕ್ಕೂ (ಮನಸ್ಸಿಗೂ), ಗೋಚರಮಲ್ಲನ್-ಗೋಚರವಲ್ಲದೆ ಇರುವನು. ತೂಯನ್-ಪರಿಶುದ್ಧನಾಗಿಯೂ, ತುಯಕ್ಕನ್-ಅನಾಶ್ರಿತರಿಂಗೆ ಮನಃಕ್ಷೋಭವನ್ನುಂಟು ಮಾಡುವವನಾಗಿಯೂ, ಮಯಕ್ಕನ್-ಭ್ರಾನ್ತಿಜನಕನಾಗಿಯೂ, ಇರುವವನು. (ಇಂತಹ ಭಗವನ್ತನೇ,) ಎನ್ನುಡೈಯ-ನನ್ನ, ತೋಳ್ ಇಣೈಯಾನ್-ಎರಡು ತೋಳುಗಳಮೇಲೂ ವ್ಯಾಪಿಸಿದಾನೆ.

( ಸ–ಗಾ–ರ || )—

ಮಾಯಿಾ ಮೇ ಹೃದಯಸ್ಥಿತಃ ಕಿಮಿತರೈರೇವಂ ವಿಧಸ್ಸ್ಯಾದಸೌ ?
ದೇಹೇ ಚಾತ್ಮನಿ ಮೇ ಶರೀರ್ಯನಿಲವಹ್ನ್ಯಾತ್ಮಾಽಪಿ ದೂರೇಽಕ್ಷತಾಮ್ |
ಭಕ್ತಾನಾಂ ಸುಲಭಶ್ಚ ದೃಪ್ತಮನಸಾಂ ಚಿನ್ತ್ಯಾದ್ಯತೀತಸ್ಸ್ವಯಂ
ಶುದ್ಧಸ್ಸಂಶಯಮೋಹಕೃಚ್ಚ ಜಗತಾಂ ಬಾಹೂಪರಿಷ್ಠೋ ಮಮ ||

ತಾ|| (ಸರ್ವಾನ್ತರಾತ್ಮನಾದವನು ನನ್ನ ತೋಳುಗಳಲ್ಲಿಯೂ ಸೇರಿದಾನೆಂದು ಹೇಳುತ್ತಾರೆ.) ಮಾಯಾಚೇಷ್ಟಿತನಾದ ಭಗವನ್ತನೇ ನನ್ನ ಹೃದಯದಲ್ಲಿ ವಾಸ ಮಾಡುತ್ತಿದಾನೆ. ಹೀಗೆಯೇ ಇತರರ ವಿಷಯದಲ್ಲೂ ಇರುತ್ತಾನೋ ಎಂದರೆ— (ಇಲ್ಲ.) ತಾನೇ ಶರೀರ–ಜೀವ–ವಾಯು–ಅಗ್ನಿ–ಇತ್ಯಾದಿ ರೂಪನಾಗಿಯೂ, ಅನಾಶ್ರಿತರಿಗೆ ದೂರಸ್ಥನಾಗಿಯೂ, ಆಶ್ರಿತರಿಗೆ ಸಮೀಪಸ್ಥನಾಗಿಯೂ, ಮನೋವಾಗತೀತನಾಗಿಯೂ, ಪರಿಶುದ್ಧನಾಗಿಯೂ, ಅನ್ಯಪರರಿಗೆ ಮನಃಕ್ಷೋಭ, ಸನ್ದೇಹ, ಮೋಹಾದಿ ಜನಕನಾಗಿಯೂ ಇರುವನು. ಇಂತಹ ಸರ್ವೇಶ್ವರನೇ, ಈಗ ನನ್ನ ಎರಡು ತೋಳುಗಳಮೇಲೂ ಕುಳಿತಿದಾನೆಂದು ಭಾವವು.

(೭) ತೋಳಿಣೈಮೇಲುಮ್ ನಱ್ ಮಾರ್ಬಿನ್ಮೇಲುಮ್
ಶುಡರ್ಮುಡಿಮೇಲುಮ್,
ತಾಳಿಣೈಮೇಲುಮ್ ಪುನೈನ್ದ ತಣ್ಣನ್ದುೞಾಯುಡೈ ಯಮ್ಮಾನ್,
ಕೇಳಿಣೈಯೊನ್ಱುಮಿಲಾದಾನ್ ಕಿಳರುಮ್ ಶುಡರೊಳಿಮೂರ್ತಿ,
ನಾಳಣೈನ್ದೊನ್ಱುಮ್ ಅಕಲಾನೆನ್ನುಡೈ ನಾವಿನುಳಾನೇ.

ಪ್ರ|| ತೋಳಿಣೈಮೇಲುಮ್ – (ಲೋಕರಕ್ಷಕವಾದ) ಎರಡು ತೋಳುಗಳ ಮೇಲೂ, ನಲ್ ಮಾರ್ಬಿನ್ಮೇಲುಮ್ – (ಲಕ್ಷ್ಮೀವಾಸಸ್ಥಲವಾದ) ವಕ್ಷಸ್ಥಲದ ಮೇಲೂ, ಶುಡರ್ ಮುಡಿಮೇಲುಮ್–(ಸರ್ವಶೇಷಿತ್ವಸೂಚಕವಾದ) ಉಜ್ಜ್ವಲ ಕಿರೀಟದಮೇಲೂ, ತಾಳಿಣೈಮೇಲುಮ್–(ಭಕ್ತರಿಗೆ ಆಶ್ರಯಸ್ಥಾನವಾದ) ಪಾದ ಯುಗಳದಮೇಲೂ, ಪುನೈನ್ದ – ಅಲಂಕಾರವಾಗಿ ಸಮರ್ಪಿಸಲ್ಪಟ್ಟ, ತಣ್ ಅಮ್ ತುೞಾಯುಡೈ – ಶೀತಲವಾಗಿ ರಮ್ಯವಾದ ತುಳಸೀಮಾಲೆಗಳನ್ನು ಧರಿಸಿ ಇರುವ, ಅಮ್ಮಾನ್ – ಸ್ವಾಮಿಯು, ಕೇಳ್ ಇಣೈ – ಉಚಿತವಾದ ಉಪಮಾನವು, ಒನ್ಱುಮ್ ಇಲಾದಾನ್–ಯಾವುದೂ ಇಲ್ಲದವನಾಗಿಯೂ, ಕಿಳರುಮ್ ಶುಡರ್–ಅತಿಶಯಿತಕಾಂತಿ ಯುಕ್ತವಾದ, ಒಳಿಮೂರ್ತಿ – ತೇಜೋಮಯವಾದ ದಿವ್ಯಮಂಗಳವಿಗ್ರಹವುಳ್ಳವ

ನಾಗಿಯೂ, ನಾಳ್-ಪ್ರತಿದಿನವೂ, ಅಣ್ಣೈನ್ದು-ಸೇರಿಕೊಂಡು, ಒನ್ರುಮ್-ಸ್ವಲ್ಪವೂ (ಒಂದು ಕ್ಷಣವೂ), ಅಕಲಾ-ಬಿಡದೆ ಇರುವವನಾಗಿ, ಎನ್ನುಡೈ-ನನ್ನ, ನಾವಿನು ಳಾ-ನಾಲಿಗೆಯನ್ನು ಆಶ್ರಯಿಸಿದಾನೆ.

( ಸ-ಗಾ-ರ ॥ )—

ಬಾಹೂನಾಮುಪರಿ ಪ್ರಿಯೋರಸಿ ಶುಭೇ ಮೌಳಿಸ್ಥಲೇ ಚೋಜ್ಜ್ವಲೇ
ಪಾದಾಮ್ಭೋಜಯುಗೇ ಚ ರಮ್ಯತುಲಸೀಮಾಲಾಶ್ಚ ಶ್ರೀಧರಃ।
ಸ್ವಾಮೀ ನಿಸ್ಸಮವೈಭವಸ್ಸ್ವಮಹಸಾ ದೀಪ್ರಸ್ಸ್ವಮೂರ್ತಿಸ್ಸದಾ
ಸಂಶ್ಲಿಷ್ಯಾಪಿ ಮಯಾ ಸಹಾನವರತಂ ಜಿಹ್ವಾಂ ಪ್ರವಿಷ್ಟೋಽ ಮಮ ॥

ತಾ॥ (ದಿವ್ಯಾಲಂಕಾರಭೂಷಿತನಾಗಿ ಬಂದು ನನ್ನ ನಾಲಿಗೆಯಲ್ಲಿ ಈಗ ನಿತ್ಯ ವಾಸವಂ ಮಾಡುತ್ತಿದಾನೆಂದು ಹೇಳುತ್ತಾರೆ.) ತೋಳುಗಳಮೇಲೂ, ವಕ್ಷಸ್ಥಲ ದಲ್ಲೂ, ದಿವ್ಯಕಿರೀಟದಮೇಲೂ, ಪಾದಗಳಮೇಲೂ ಸಮರ್ಪಿಸಲ್ಪಟ್ಟ ತುಳಸೀ ಮಾಲೆಗಳನ್ನು ಧರಿಸಿ ನಮ್ಮ ಸ್ವಾಮಿಯು ಉಪಮಾನರಹಿತನಾಗಿ ನಿರವಧಿಕ ದಿವ್ಯ ತೇಜೋಮೂರ್ತಿಯಾಗಿ ಪ್ರಕಾಶಿಸುತ್ತ, ನನ್ನ ನಾಲಿಗೆಯಲ್ಲಿ ಈಗ ನಿತ್ಯವಾಸವಂ ಮಾಡುತ್ತಿದಾನೆ.

(೮) ನಾವಿನುಳ್ ನಿನ್ರು ಮಲರುಮ್ ಞಾನಕ್ಕಲೈಕಳುಕ್ಕೆಲ್ಲಾಮ್,
ಆವಿಯುಮಾಕ್ಕೈಯುಮ್ ತಾನೇ ಅಳಿಪ್ಪೋಡಳಿಪ್ಪವನ್ ತಾನೇ,
ಪೂವಿಯಲ್ ನಾಲ್ ತಡತ್ತೋಳನ್ ಪೊರುಪಡೈ ಯಾಳಿ
ಶಙ್ಗೇನ್ದುಮ್,
ಕಾವಿನನ್ನೇನಿ ಕ್ಕಮಲಕ್ಕಣ್ಣನ್ ಕಣ್ಣನುಳಾನೇ.

ಪ್ರ॥ ನಾವಿನುಳ್ ನಿನ್ರು-ನಾಲಗೆಯೊಳಗೆ ನಿಂತು, ಮಲರುಮ್-ವಿಕಾಸವನ್ನು ಹೊಂದುವ, ಞಾನಕ್ಕಲೈ ಕಳುಕ್ಕೆಲ್ಲಾಮ್-ಜ್ಞಾನವನ್ನುಂಟುಮಾಡುವ ವಿದ್ಯೆಗಳಿ ಗೆಲ್ಲಾ, ಆವಿಯುಮ್-ಆತ್ಮಸ್ಥಾನೀಯವಾದ ಅರ್ಥವೂ, ಆಕ್ಕೈಯುಮ್-ಶರೀರ ಸ್ಥಾನೀಯವಾದ ಶಬ್ದವೂ, ತಾನೇ-ತಾನೇ ಆಗಿ, ಅಳಿಪ್ಪೋಡು-ರಕ್ಷಿಸೋಣವೆಂಬ ಕಾರ್ಯದೊಡನೆ, ಅಳಿಪ್ಪವನ್ ತಾನೇ-ಸಂಹರಿಸೋಣವೆಂಬ ಕಾರ್ಯವುಳ್ಳವನೂ ತಾನೇ ಆಗಿ, ಪೂವಿಯಲ್-ಪುಷ್ಪಮಾಲೆಗಳೊಡನೆ ಯಾವಾಗಲೂ ಕೂಡಿರುವ, ನಾಲ್-ನಾಲ್ಕು, ತಡಮ್ ತೋಳ್-ಮಹಾಭುಜಗಳುಳ್ಳವನೂ, ಪೊರುಪಡೈ-ಶತ್ರುನಾಶಕ ವಾದ ಆಯುಧಗಳಾದ, ಆಳಿ-ಚಕ್ರವನ್ನೂ, ಶಙ್ಗು-ಶಂಖವನ್ನೂ, ಏನ್ದುಮ್-

ಧರಿಸಿರುವ, ಕಾವಿ–ನೀಲೋತ್ಪಲದಂತೆ, ನಲ್‌ಮೇನಿ–ರಮಣೀಯವಾದ ಶರೀರವುಳ್ಳವನೂ, ಕಮಲಕ್ಕಣ್ಣನ್ – ಕಮಲದಂತೆ ಕಣ್ಣುಗಳುಳ್ಳವನೂ – (ಆದ ಭಗವನ್ತನು), ಎನ್ ಕಣ್ಣಿನುಳ್ಳಾನೇ–(ಇಂತಹ ಸೌನ್ದರ್ಯದೊಡನೆ) ನನ್ನ ಕಣ್ಣಿನೊಳಗೆ ಇದಾನೆ.

( ಸ–ಗಾ–ರ || )—

**ವಿದ್ಯಾಸ್ವಪ್ಯಖಿಲಾಸು ಶಾಸ್ತ್ರತನುರೂಪೋಽಯಂ ಸ್ವಯಂ ಚೋದ್ಭವ-**
**ಧ್ವಂಸಾದೇರಪಿ ಕಾರಣಂ ಚ ಕುಸುಮಾವಳ್ಯಾ ಚತುರ್ಬಾಹುಧೃತ್ |**
**ಸ್ವೈರಂಧ್ವಂಸಕಚಕ್ರಶಙ್ಖಭೃದಸೌ ನೀಲೋತ್ಪಲಶ್ಯಾಮಲಃ**
**ಪದ್ಮಾಕ್ಷೋಽದ್ಯ ಚಕಾಸ್ತಿ ಚೋಜ್ಜ್ವಲತರೋ ಮನ್ನೇತ್ರಯುಗ್ಮೇ ಹರಿಃ ||**

ತಾ|| (ಸಕಲವಿದ್ಯಾವೇದ್ಯನಾದ ಸರ್ವೇಶ್ವರನು ತನ್ನ ದಿವ್ಯರೂಪವನ್ನು ಈಗ ನನಗೆ ಚಕ್ಷುರ್ಗೋಚರವಾಗುವಂತೆ ಮಾಡಿದಾನೆಂದು ಹೇಳುತ್ತಾರೆ.) ಸಕಲ ವಿದ್ಯೆಗಳಿಗೂ ಆಶ್ರಯಭೂತನಾಗಿ ತಾನೇ ಶಬ್ದಾರ್ಥಸ್ವರೂಪಿಯಾಗಿಯೂ, ಸೃಷ್ಟಿ ಸಂಹಾರಾದಿಗಳಿಗೆ ಕಾರಣಭೂತನಾಗಿಯೂ, ಚತುರ್ಭುಜನಾಗಿಯೂ, ಶಙ್ಖಚಕ್ರ ಧಾರಿಯಾಗಿಯೂ, ನೀಲೋತ್ಪಲಶ್ಯಾಮಲನಾಗಿಯೂ, ಪದ್ಮಾಕ್ಷನಾಗಿಯೂ–ಪ್ರಕಾಶಿಸುತ್ತಿರುವ ಸರ್ವೇಶ್ವರನೇ ಈಗ ನನ್ನ ಕಣ್ಣಿನೊಳಗೆ ಇದಾನೆ.

**(೯) ಕಮಲಕ್ಕಣ್ಣನೆನ್ ಕಣ್ಣಿನುಳ್ಳಾನ್ ಕಾಣ್ಬನವನ್ ಕಣ್ಕಳಾಲೇ,**
**ಅಮಲಙ್ಗಳಾಕ ವಿೞಿಕ್ಕುಮೈಮ್ಬುಲನುಮವನ್ ಮೂರ್ತ್ತಿ**
**ಕಮಲತ್ತಯನ ನಮ್ಬಿ ತನ್ನೈ ಕಣ್ಣುದಲಾನೊಡುಮುಡನ್**
**ತೋನ್ಱಿ,**
**ಅಮಲತ್ತೆಯ್ವತ್ತೊಡುಲಕಮಾಕ್ಕಿ ಯೆನ್ನೈಱಿಯುಳಾನೇ.**

ಪ್ರ|| ಕಮಲಕ್ಕಣ್ಣನ್ – ತಾವರೆಹೂವಿನಂತೆ ನೇತ್ರಗಳುಳ್ಳವನು, ಎನ್ ಕಣ್ಣಿನುಳ್ಳಾನ್–ನನ್ನ ಕಣ್ಣಿನೊಳಗೆ ಇದಾನೆ ಕಾಣ್ಬನ್ – (ಅದೃಶ್ಯನೆಂದು ವೇದಾದಿ ಶಾಸ್ತ್ರಗಳಲ್ಲಿ ಹೇಳಲ್ಪಡುವವನನ್ನು) ನಾನು ಈಗ ಕಣ್ಣಿನಿಂದ ಸಾಕ್ಷಾತ್ತಾಗಿಯೇ ನೋಡುತ್ತಿದೇನೆ. (ಅದಕ್ಕೆ ಕಾರಣವೇನೆಂದರೆ—) ಅವನ್–ಆ ಕಮಲನಯನನು, ಕಣ್‌ಕಳಾಲೇ–ತನ್ನ ಕಣ್ಣುಗಳಿಂದ, ಅಮಲಙ್ಗಳಾಕ–ಅಜ್ಞಾನಾದಿ ದೋಷಗಳು ಹೋಗುವಂತೆ, ವಿೞಿಕ್ಕುಮ್–ಕಟಾಕ್ಷಿಸುತ್ತಿರುವನು; (ಅದರಿಂದ) ಐಮ್‌ಪುಲನುಮ್–

(ಕಣ್ಣಿ) ಐದು ಇನ್ದ್ರಿಯಗಳೂ(ಚಕ್ಷುರಿನ್ದ್ರಿಯದಂತೆಯೇ), ಅವನ್‌ಮೂರ್ತಿ–ಅವನಿಗೇ ವಶಭೂತವಾಗಿವೆ. (ಅವನು ಯಾರೆಂದರೆ—) ಕಮಲತ್ತು – ಕಮಲದಿಂದ ಉದ್ಭವಿಸಿ, ಅಯನ್–ಅಜ (ಅಯೋನಿಜ) ನೆಂದು ಹೆಸರುಳ್ಳ ಬ್ರಹ್ಮನೆಂಬ, ತನ್ನೈ–ಜ್ಞಾನಾದಿಪೂರ್ಣನಾದವನನ್ನು, ಕಣ್ಣುದಲಾನೊಡು – ಒಂದು ಕಣ್ಣನ್ನು ಲಲಾಟದಲ್ಲಿಯೂ ಉಳ್ಳ ರುದ್ರನೊಡನೆ, ತೋಱ್ಱಿ–ಪ್ರಕಾಶಪಡಿಸಿ (ಸೃಷ್ಟಿಸಿ), (ಅವರೇ ಮೊದಲಾದ) ಅಮಲನ್–ನಿರ್ಮಲಚಿತ್ತರಾದ, ತೆಯ್ವತ್ತೋಡು–ದೇವತೆಗಳೊಡನೆ, ಉಲಕಮ್–ಲೋಕಗಳನ್ನೆಲ್ಲಾ ಸೃಷ್ಟಿಸಿದವನೇ, ಎನ್–ನನ್ನ, ನೆಱ್ಱಿಯುಳ್ಳಾನ್–ಹಣೆಯಲ್ಲಿ (ಲಲಾಟದಲ್ಲಿ) ಇದಾನೆ.

( ಸ–ಗಾ–ರ ॥ )—

**ಪದ್ಮಾಕ್ಷೋ ಮಮ ನೇತ್ರಗೋಚರತಯಾ ಭಾತಿ ಸ್ವಯಂ! ಯಶ್ಚ ಮಾಂ**
**ಕೃತ್ವಾ ದಿವ್ಯಕಟಾಕ್ಷಪಾತ್ರಮಪಿ ಮೇ ಪಞ್ಚೇನ್ದ್ರಿಯಾಣಾಂ ಪ್ರಭುಃ ।**
**ಆವಿರ್ಭಾವ್ಯ ಸರೋಜಸಮ್ಭವಮಜಂ ಫಾಲಾಕ್ಷಯುಕ್ತಂ ವಿಧಿಂ**
**ದೇವಾನಪ್ಯಮಲಾಂಶ್ಚ ಲೋಕಸರಣಿಂ ಸೃಷ್ಟ್ವಾ ಚ ಲಲಾಟೇಽಸ್ತಿ ಮೇ ॥**

ತಾ॥ (ನನ್ನ ಕಣ್ಣುಗಳಲ್ಲಿ ನಿಂತಿದ್ದವನು ಈಗ ನನ್ನ ಹಣೆಯಲ್ಲಿ ಬಂದು ಪ್ರಕಾಶಿಸುತ್ತಿದಾನೆಂದು ಹೇಳುತ್ತಾರೆ.) ಆ ಕಮಲನೇತ್ರನೇ ನನಗೆ ಚಕ್ಷುರ್ಗೋಚರನಾಗಿ ನನ್ನ ಅಜ್ಞಾನಾದಿ ದೋಷಗಳು ಹೋಗುವಂತೆ ನನ್ನನ್ನು ಕಟಾಕ್ಷಿಸುತ್ತಾ ನನ್ನ ಪಂಚೇನ್ದ್ರಿಯಗಳನ್ನೂ ವಶೀಕರಿಸಿ ಇರುತ್ತಾನೆ. ಪೂರ್ವದಲ್ಲಿ ಬ್ರಹ್ಮರುದ್ರಾದಿದೇವತೆಗಳನ್ನೂ ಸಕಲ ಲೋಕಗಳನ್ನೂ ಸೃಷ್ಟಿಸಿದ ಆ ಸರ್ವೇಶ್ವರನೇ ಈಗ ನನ್ನ ಲಲಾಟಸ್ಥಲದಲ್ಲಿ ಬಂದು ಸೇರಿ ಇದಾನೆ.

(೧೦) ನೆಱ್ಱಿಯುಳ್ ನಿನ್ಱೆನ್ನೈಯಾಳುಮ್ ನಿರೈಮಲರ್
ಪಾದಙ್ಗಳ್‌ಶೂಡಿ,
ಕಱ್ಱೈತ್ತುೞಾಯ್‌ಮುಡಿ ಕೋಲಕ್ಕಣ್ಣಪಿರಾನೈ ತ್ತೊೞು,
ವಾರ್
ಒಱ್ಱೈಪ್ಪಿಱೈಯಣಿನ್ದಾನುಮ್ ನಾನ್ಮುಗನುಮಿನ್ದಿರನುಮ್,
ಮಱ್ಱೈಯಮರರುಮೆಲ್ಲಾಮ್, ವನ್ದೆನದುಚ್ಚಿಯುಳಾನೇ.

ಪ್ರ॥ ಎನ್ನೈಯಾಳುಮ್ – ನನ್ನನ್ನು ಆಳುವವನೆಂದು, ನಿರೈಮಲರ್–ಪುಷ್ಪಗಳಿಂದ ಅಲಂಕೃತವಾದ, ಪಾದಙ್ಗಳ್–ಪಾದಗಳನ್ನು, ಶೂಡಿ–ತಮ್ಮ ಶಿರಸ್ಸಿನಲ್ಲಿ

ಧರಿಸಿ, ಕಱ್ಱೈತ್ತುೞಾಯ್-ನಿಬಿಡವಾಗಿ ಸೇರಿರುವ ತುಳಸೀರೂಪವಾದ, ಮುಡಿಕ್ಕೋಲಮ್-ಕಿರೀಟದ ಅಲಂಕಾರವುಳ್ಳವನಾಗಿರುವ, ಕಣ್ಣಪಿರಾನೈ-ಶ್ರೀಕೃಷ್ಣಸ್ವಾಮಿಯನ್ನು, ತೊೞುವಾರ್-ಅಂಜಲಿಬಂಧಾದಿಗಳಿಂದ ಸೇವಿಸುವವರು, ಒಱ್ಱೈಪ್ಪಿಱೈ-ಒಂದೇ ಕಲೆಯುಳ್ಳ ಚನ್ದ್ರನನ್ನು, ಅಣಿನ್ದಾನುಮ್-ಶಿರೋಭೂಷಣವಾಗಿಯುಳ್ಳ ರುದ್ರನೂ, ನಾನ್ಮುಕನುಮ್-ಚತುರ್ಮುಖನೂ, ಇನ್ದಿರನುಮ್-ಇಂದ್ರನೂ, ಮಱ್ಱೈಮತ್ತು-ಇರುವ, ಅಮರರುಮೆಲ್ಲಾಮ್-ದೇವತೆಗಳೆಲ್ಲರೂ. (ಹೀಗೆ ದೇವವರ್ಗಸಂಸೇವಿತನಾದ ಸರ್ವೇಶ್ವರನು) ನೆಱ್ಱಿಯುಳ್ನಿನ್ಱು-ಲಲಾಟದಲ್ಲಿ ನಿಂತಿದ್ದವನು, ಎನದುಉಚ್ಚಿಯುಳಾನ್-(ಈಗ) ನನ್ನ ಶಿರಸ್ಸಿನಲ್ಲಿ ಇದಾನೆ.

( ಸ-ಗಾ-ರ || )—

**ಭಕ್ತಾನಾಂ ಶಿರಸಿ ಪ್ರಯುಕ್ತಚರಣಂ ಮಾಲಾ ತುಳಸ್ಯಾಽಶ್ಲಿಷ್ಟತಂ**
**ಕೃಷ್ಣಂ ದೇವಮಿಮಂ ಭಜನ್ತಿ ಹಿ ಸುರಾಸ್ಸರ್ವೇಽಪಿ ಭಕ್ತ್ಯಾ ಸ್ವಯಮ್।**
**ರುದ್ರಶ್ಚನ್ದ್ರಕಲಾಧರೋಽಪಿ ಚ ಚತುರ್ವಕ್ತ್ರೋಽಪಿ ಚೇನ್ದ್ರಾದಯಃ!**
**ಪ್ರತ್ಯಕ್ಷೋ ಮಮ ಮಸ್ತಕೇಽಸ್ಯ ನಿತಲಾಂ ಭಾತಿ ಸ್ವಯಂ ತಾದೃಶಃ ||**

ತಾ|| : ಬ್ರಹ್ಮಾದಿ ದೇವತೆಗಳೆಲ್ಲಾ ಯಾವನನ್ನು ಸೇವಿಸುವುದಕ್ಕಾಗಿ ಕಾಲ ನಿರೀಕ್ಷಣವಂಮಾಡಿ ಕಾದುಕೊಂಡಿರುತ್ತಾರೆಯೋ ಅನ್ತಹ ಸರ್ವೇಶ್ವರನು ಈಗ ನನ್ನ ಮುಂದೆ ನಿಂತು ಸಮಯನಿರೀಕ್ಷಣವಂಮಾಡಿ ಕಾದುಕೊಂಡು, ನನ್ನ ಹಣೆಯನ್ನು ಬಿಟ್ಟು ಶಿರಸ್ಸಿನಲ್ಲಿ ಸಕ್ತನಾಗಿದಾನೆಂದು ಹೇಳುತ್ತಾರೆ. ಬ್ರಹ್ಮರುದ್ರೇನ್ದ್ರಾದಿ ದೇವತೆಗಳೆಲ್ಲರೂ (ಪುಷ್ಪಾಲಂಕೃತಚರಣನಾದ) ದಿವ್ಯತುಳಸೀಮಾಲಾಲಂಕೃತ ಕಿರೀಟಧಾರಿಯಾದ ಶ್ರೀಕೃಷ್ಣನನ್ನು ಸಾಂಜಲಿಬಂಧರಾಗಿ ಸೇವಿಸುತ್ತಿರುವರು. ಅನ್ತಹ ಸರ್ವೇಶ್ವರನೇ ಈಗ ನನ್ನ ಹಣೆಯನ್ನು ಬಿಟ್ಟು ಶಿರಸ್ಸಿಗೆ ಬಂದಿದಾನೆ.

**(೧೧) ಉಚ್ಚಿಯುಳ್ಳೇ ನಿಱ್ಕುಮ್ ತೇವತೇವಱ್ಕು ಕ್ಕಣ್ಣಪಿರಾಱ್ಕು,**
**ಇಚ್ಚೈಯುಳ್ ಶೆಲ್ಲವುಣರ್ತ್ತಿ ವಣ್ ಕುರುಕೂರ್ ಚ್ಚಡಕೋಪನ್,**
**ಇಚ್ಚೊನ್ನವಾಯಿರತ್ತುಳಿವೈಯುಮೋರ್ ಪತ್ತೆಮ್ಬಿರಾಱ್ಕು,**
**ನಿಚ್ಚಲುಮ್ ವಿಣ್ಣಪ್ಪಮ್ ಶೆಯ್ಯ ನೀಳ್ ಕೞಲ್ ಶೆನ್ನಿ**
**ಪೊರುಮೇ.**

ಪ್ರ|| ಉಚ್ಚಿಯುಳ್ಳೇನಿಱ್ಕುಮ್ -ಶಿರಸ್ಸಿನಲ್ಲಿರುವ, ತೇವತೇವಱ್ಕು-ದೇವದೇವನಾದವನಿಗೆ, ಕಣ್ಣಪಿರಾಱ್ಕು-(ಪರತ್ವ ಸೌಲಭ್ಯಗಳುಳ್ಳ) ಕೃಷ್ಣಸ್ವಾಮಿಗೆ, ಇಚ್ಚೈಯುಳ್-

ತಮ್ಮಲ್ಲಿ ಅವನಿಗೆ ಉಂಟಾದ ಪ್ರೀತಿಯು, ಉಳ್ಳಿಲ್ಲ-ತಮ್ಮ ಹೃದಯದೊಳು ಪ್ರವೇಶಿಸಲು, ಉಣರ್ತ್ತಿ-ಅವನಿಗೆ ಅದನ್ನು ತಿಳಿಸಿ, ವಣ್-ಉದಾರವಾದ, ಕುರುಕೂರ್ ಶಡಕೋಪನ್-ಕುರುಕಾಪುರಿಯ ಶ್ರೀ ಶಠಾರಿ ಮುನಿವರ್ಯರು, ಶೊನ್ನ-ಹೇಳಿದ (ರಚಿಸಿದ), ಇವ್ವಾಯಿರತ್ತುಳ್- ಈ ಸಹಸ್ರಪದ್ಯಗಳೊಳು, ಇವ್ವೈಯುಮ್ ಓರ್‌ಪತ್ತು-ಈ ಅನ್ಯಾದೃಶವಾದ ದಶಕವು, ಎನ್ ಪಿರಾಱ್ಕು-ನಮ್ಮ ಸ್ವಾಮಿಗೆ, ವಿಣ್ಣಪ್ಪಮ್ ಶೆಯ್ಯ-ವಿಜ್ಞಾಪಿಸಿ ಅನುಸನ್ಧಾನಮಾಡಿದರೆ, ನೀಳ್‌ಕಳಲ್-(ಆಶ್ರಿತರಿರುವ ಸ್ಥಾನದವರೆಗೆ ಬರುವ) ಅವನ ದೀರ್ಘವಾದ ಪಾದಗಳು, ನಿಚ್ಚಲುಮ್-ಪ್ರತಿದಿನವೂ (ನಿತ್ಯವೂ), ಶೆನ್ನಿ ಪೊರುಮೇ-(ಇವರ) ಶಿರಸ್ಸಿನಲ್ಲೇ ಸಕ್ತವಾಗಿರುವುವಷ್ಟೆ!

( ಸ-ಗಾ-ರ || )—

**ಏವಂ ಮಸ್ತಕಸುಪ್ರತಿಷ್ಠಿತಮಿಮಂ ದೇವಾಧಿದೇವಂ ಹರಿಂ**
**ಕೃಷ್ಣಂ ಪ್ರೇಮಭರೇಣ ಶಂಸಿತುಮಯಂ ಭಕ್ತಶ್ಶಠಾರಿರ್ಮುನಿಃ |**
**ಸಾಹಸ್ರಂ ಕುರುಕೇಶ್ವರಸ್ಸಮತನೋದ್ವ್ಯಕ್ತಾ ನಿವೇದ್ಯ ಸ್ವಯಂ**
**ತತ್ರೇದಂ ದಶಕಂ ವಹನ್ತಿ ಶಿರಸಾ ತತ್ಪಾದಯುಗ್ಮಂ ಸದಾ ||**

ತಾ|| (ಈ ದಶಕವನ್ನು ಶ್ರೀ ಭಗವನ್ತನ ಸನ್ನಿಧಿಯಲ್ಲಿ ವಿಜ್ಞಾಪಿಸಿದರೆ ಅನ್ತಹ ಭಕ್ತರ ತಲೆಯಲ್ಲಿ ಅವನ ಪಾದಾರವಿನ್ದದ್ವಯವು ಯಾವಾಗಲೂ ಇರುವುದೆಂದು—ಶ್ರೀ ಶಠಾರಿಮುನಿವರ್ಯರು ಫಲಶ್ರುತಿಯನ್ನು ಹೇಳುತ್ತಾರೆ). ಸರ್ವದೇವಾಧಿದೇವನಾದ ಶ್ರೀ ಕೃಷ್ಣನಿಗೆ (ತಮ್ಮಲ್ಲಿ ಅವನು ಮಾಡಿದ ಪ್ರೀತಿಗಾಗಿ) ತಮ್ಮ ಮನೋಭಾವದಲ್ಲಿರುವ ಕೃತಜ್ಞತೆಯನ್ನು ತಿಳಿಸುವುದಕ್ಕಾಗಿ ನಮ್ಮಾಳ್ವಾರ್‌ರಿಂದ ರಚಿಸಲ್ಪಟ್ಟ ಸಹಸ್ರಪದ್ಯಗಳೊಳು | ಈ ದಶಕವನ್ನು ಯಾರು ಅನುಸನ್ಧಾನಮಾಡಿ ಶ್ರೀ ಭಗವನ್ತನಿಗೆ ವಿಜ್ಞಾಪಿಸುವರೋ ಅವರ ಶಿರಸ್ಸಿನಲ್ಲಿ ಅವನ ಪಾದಾರವಿನ್ದಯುಗಳವು ನಿತ್ಯವಾಗಿಯೂ ಇರುವುದು—ಎಂದು ತಾತ್ಪರ್ಯ.

---

( ದ್ರು-ಉ-ಸಂ. )—

**ಆತ್ಮಾರ್ಜವಾನುಭವಕೌತುಕಿನೋಽಸ್ಯ ಶೌರಿ-**
**ರಾತ್ಮೋಪಭೋಗರುಚಿಮಭ್ಯಧಿಕಾಂ ದದಾನಃ |**
**ದೇವ್ಯಾದಿವದ್ರುಸಯಿತಾ ಕ್ರಮತೋಽಖಿಲಾಙ್ಗಾ-**
**ನ್ಯಾಶಿಶ್ರಿಯತ್ತದವದಪ್ಪವನೋ ಶಠಾರಿಃ ||**

---

( ದ್ರ-ಉ-ತಾ-ರೆ. )—

ಪರ್ಯನ್ತೇಽಭ್ಯಾಶೇ ಚ ದೃಷ್ಟಂ ಸ್ವವಿರಹವಿಮುಖಂ ದಿಕ್ಷ್ವವತ್ಪಾರ್ಶ್ವಲೀನಂ
ಚಿತ್ತೇ ಕ್ಲೃಪ್ತಪ್ರವೇಶಂ ಭುಜಶಿಖರಗತಂ ತಾಲುಸಿಂಹಾಸನಸ್ಥಮ್ |
ಚಕ್ಷುರ್ಮಧ್ಯೇ ನಿವಿಷ್ಟಂ ಸ್ಥಿತಮಳಿಕತಟೇ ಮಸ್ತಕೇ ತಸ್ಥಿವಾಂಸಂ
ಪ್ರತ್ಯಾಹಾರೋಕ್ತರೀತ್ಯಾ ವಿಭುಮನುಬುಭುಜೇ ಸಾತ್ಮ್ಯಭೋಗಪ್ರದಾನಾತ್ ||

---

(ಈ ನವಮದಶಕದ ಸಾರಾಂಶ—)

ಶ್ರಿಯಃಪತಿಯಾದ ಭಗವನ್ತನು ತನ್ನ ಭೋಗರಸವನ್ನು ಈ ಆೞ್ವಾರ್ರಿಗೆ ಉಂಟುಮಾಡುವುದಕ್ಕಾಗಿ ಕ್ರಮೇಣ ಇವರ ಪರ್ಯನ್ತಕ್ಕೂ, ಸಮೀಪಕ್ಕೂ ಬಂದು ನಿಂತು, ಇವರನ್ನು ಬಿಟ್ಟುಹೋಗಲು ಇಷ್ಟವಿಲ್ಲದವನಾಗಿ, ಇವರ ಪಾರ್ಶ್ವದಲ್ಲಿಯೂ, ಚಿತ್ತದಲ್ಲಿಯೂ, ಭುಜಗಳಲ್ಲಿಯೂ, ನಾಲಿಗೆಯಲ್ಲಿಯೂ ಕಣ್ಣುಗಳಲ್ಲಿಯೂ, ಲಲಾಟದಲ್ಲಿಯೂ, ಶಿರಸ್ಸಿನಲ್ಲಿಯೂ ಪ್ರವೇಶಿಸಿ ನಾಯಿಕಾನುಭವಮಂಮಾಡುವ ನಾಯಕನಂತೆ ಇದ್ದಾನೆಂದು ಅವನ ಅನುಭವ ಪ್ರಕಾರಗಳನ್ನು ವರ್ಣಿಸಿ ಈ ದಶಕವನ್ನು ಅನುಸನ್ಧಾನ ಮಾಡುವವರ ಶಿರಸ್ಸಿನಲ್ಲಿ ಅವನ ಪಾದಾರವಿನ್ದಗಳು ನಿತ್ಯವಾಗಿಯೂ ಇರುವುವೆಂದು ಇಲ್ಲಿ ನಿರೂಪಿಸಿರುತ್ತಾರೆ.

---

ಶ್ರೀಃ

## ಪ್ರಥಮಶತಕದಲ್ಲಿ—ದಶಮದಶಕ.

(ಪೊರುಮಾ ನೀಳ್ ಪಡೈ—)

(ಈ ದಶಕದಲ್ಲಿ ಭಗವನ್ತನ ನಿರ್ಹೇತುಕವಾದ ಮಹೋಪಕಾರಿತ್ವವನ್ನು ವರ್ಣಿಸುತ್ತಾರೆ.)

(೧) ಪೊರುಮಾ ನೀಳ್ ಪಡೈ ಯಾೞಿಶಙ್ಗತ್ತೊಡು
ತಿರುಮಾ ನೀಳ್ ಕೞಲೇೞುಲಕುಮ್ ತೊೞ,
ಒರು ಮಾಣಿಕ್ಕುಱಳಾಕಿ ನಿಮಿರ್‍ನ್ದ, ಅ
ಕ್ಕರುಮಾಣಿಕ್ಕಮೆನ್ ಕಣ್ಣುಳದಾಕುಮೋ.

ಪ್ರ॥ ಪೊರು-ಶತ್ರುನಾಶಕವಾದ, ಮಾ ಮಹತ್ತಾದ, ನೀಳ್-ಪ್ರವರ್ಧಮಾನ ವಾದ, ಪಡೈ-ಆಯುಧವಾದ, ಆೞಿಶಙ್ಗತ್ತೊಡು-ಚಕ್ರ, ಮತ್ತು ಶಂಖಗಳೊಡನೆ ಕೂಡಿದವನಾಗಿ, ತಿರು-ಶ್ರಿಯಃಪತಿತ್ವಸೂಚಕವಾದ ರೇಖೆಗಳೊಡನೆ ರಮಣೀಯ ವಾದ, ಮಾ-ಶ್ಲಾಘ್ಯವಾದ, ನೀಳ್-ಆಶ್ರಿತರಿರುವ ಸ್ಥಾನದವರೆಗೆ ವ್ಯಾಪಿಸುವಂತೆ ದೀರ್ಘವಾದ, ಕೞಲ್-ಪಾದಗಳನ್ನು, ಏೞುಲಕುಮ್-ಸಕಲಲೋಕಗಳೂ, ತೊೞ -ಸೇವಿಸುವಂತೆ, ಒರು-ಅದ್ವಿತೀಯನಾದ, ಮಾಣಿಕ್ಕುಱಳ್ ಆಕಿ-ಬ್ರಹ್ಮಚಾರಿ ಯಾದ ವಾಮನರೂಪಿಯಾಗಿ ಬಂದು, ನಿಮಿರ್ನ್ದ-(ಕಾರ್ಯಸಿದ್ಧಿಯಾದ ಒಡನೆ) ಅಪರಿಮಿತನಾಗಿ ಬೆಳೆದಂತಹ, ಅ-ಆ ವೈಭವಾತಿಶಯವುಳ್ಳ, ಕರುಮಾಣಿಕ್ಕಮ್- ನೀಲರತ್ನದಂತೆ ರಮಣೀಯಾಕೃತಿಯುಳ್ಳ ಭಗವಂತನು, ಎನ್ಕಣ್ಣುಳದು ಆಕುಮೇ- ನನ್ನ ಕಣ್ಣಿನೊಳಗಿರುವನು. (ನನ್ನ ಕಣ್ಣಿಗೆ ಗೋಚರನಾಗುವನಷ್ಟೆ.)

( ಸ-ಗಾ-ರ ॥ )—

ದಿವ್ಯಾಯುಧಾತ್ಮಕ-ಸುಚಕ್ರ-ಸುಶಙ್ಖಧಾರೀ
ಶ್ರೀಮತ್ಪದಾಮ್ಬುಜಯುಗಂ ಜಗತಾಂ ಸುಸೇವ್ಯಮ್ ।
ಕರ್ತುಂ ನಿಜಂ ಕಿಲ ವಿಲಕ್ಷಣವಾಮನಾತ್ಮಾ
ಸಂವೃದ್ಧನೀಲಮಣಿರಸ್ತಿ ಮಮಾಕ್ಷಿಯುಗ್ಮೇ ॥

ತಾ॥ (ತನ್ನ ದಿವ್ಯವಾದ ವಾಮನಾವತಾರವನ್ನು ತೋರಿಸಿ, ಮಹಾಬಲಿ ಯನ್ನು ಮೋಹಪಡಿಸಿ ತಾನು ಬೆಳೆದು ಸಕಲ ಲೋಕೋಪಕಾರವಂ ಮಾಡಿದಂತೆ ತನ್ನ ಸುನ್ದರವಾದ ರೂಪವನ್ನು ನನ್ನ ಕಣ್ಣಿಗೆ ಗೋಚರವಾಗುವಂತೆ ಮಾಡಿ ನನ್ನನ್ನು ಮೋಹಪಡಿಸುತ್ತಿದಾನೆಂದು ಹೇಳುತ್ತಾರೆ.) ಶಂಖಚಕ್ರಧಾರಿಯಾಗಿ ತನ್ನ ಆಶ್ರಿತರಕ್ಷಣಧುರೀಣವಾದ ಪಾದಗಳನ್ನು ಸಪ್ತಲೋಕಗಳೂ ಸೇವಿಸುವಂತೆ ದಿವ್ಯ ವಾಮನರೂಪಿಯಾಗಿದ್ದು ಬೆಳೆದು ಅದ್ಭುತವೈಭವವುಳ್ಳ ನೀಲಮಣಿವರ್ಣ ನಾದ ಭಗವಂತನು ನನ್ನ ಕಣ್ಣಿನೊಳಗೆ ಇರುವನಷ್ಟೆ.

(೨) ಕಣ್ಣುಳ್ಳೇ ನಿಱ್ಕುಮ್ ಕಾದನ್ಮೈಯಾಲ್ ತೊೞಿಲ್,
ಎಣ್ಣಿಲುಮ್ ವರುಮೆನ್ನಿನಿ ವೇಣ್ಡುವಮ್,
ಮಣ್ಣುಮ್ ನೀರುಮೆರಿಯುಮ್ ನಲ್ವಾಯುವುಮ್,
ವಿಣ್ಣುಮಾಯ್ ವಿರಿಯುಮೆಮ್ಬಿರಾನೈಯೇ.

ಪ್ರ॥ ಮಣ್ಣುಮ್-ಭೂಮಿಯೂ, ನೀರುಮ್-ನೀರೂ, ಎರಿಯುಮ್-ಅಗ್ನಿ ಯೂ, ನಲ್ವಾಯುವುಮ್ - ಒಳ್ಳೇ (ಧಾರಕವಾದ) ವಾಯುವೂ, ವಿಣ್ಣುಮ್-

ಆಕಾಶವನ್ನೂ, ಆಯ್-ಆಗಿ, ವಿರಿಯುಮ್ - (ಪ್ರಪಂಚರೂಪವಾಗಿ) ವಿಸ್ತರಿಸುವ, ಎಮ್ ಪಿರಾನೈ-ನಮ್ಮ ಸ್ವಾಮಿಯನ್ನು, ಇನಿ-ಇನ್ನುಮೇಲೆ, ಎನೇಣ್ಣುವಮ್-ಯಾವುದನ್ನು ಪ್ರಾರ್ಥಿಸೋಣ ? ಕಾದನ್ಮೈಯಾಲ್-ಭಕ್ತಿಯೊಡನೆ, ತೊಳ್ದಿಲ್-ನಮಸ್ಕಾರಾದಿಗಳಂ ಮಾಡಿದರೆ, (ಅವನು) ಕಣ್ಣುಳ್ಳೇ ನಿಱ್ಕುಮ್-ಕಣ್ಣಿಗೆ ಗೋಚರನಾಗಿಯೇ ನಿಲ್ಲುವನು. ಎಣ್ಣಿಲುಮ್-ಧ್ಯಾನಮಾಡಿದರೂ, ವರುಮ್-ಸ್ವಾಧೀನನಾಗಿ ಸಮೀಪಕ್ಕೆ ಬರುವನು.

( ಸ-ಗಾ-ರ || )—

ಯಃ ಪಞ್ಚಭೂತಜಗದಾತ್ಮಕ ಏವ ನಾಥ-
ಸ್ತಂ ಪ್ರಾಪ್ಯ ಭಕ್ತಿಭರಿತಾ ಯದಿ ಸೋಽಸ್ತಿ ದೃಶ್ಯಃ ।
ಸಞ್ಚಿನ್ತಯನ್ತಿ ಯದಿ ತಂ ಸ ತದಾಽಪಿ ವಶ್ಯ-
ಸ್ತಸ್ಮಾದ್ಭಕ್ತಿಯುಕ್ತಮನಸಾಂ ! ಕಿಮಿತೋಽಸ್ತಿ ಕೃತ್ಯಮ್ ? ॥

ತಾ|| ಪಂಚಭೂತಾತ್ಮಕನಾಗಿಯೂ ಸಕಲಜಗದಾತ್ಮಕನಾಗಿಯೂ ವ್ಯಾಪಿಸಿರುವ ನಮ್ಮ ಸ್ವಾಮಿಯನ್ನು ನಾವು ಪ್ರಾರ್ಥಿಸಬೇಕಾದುದೇನು ಇದೆ ? ಭಕ್ತಿಯೊಡನೆ ನಾವು ನಮಸ್ಕರಿಸಿ ಸೇವಿಸಿದರೆ ಅವನು ಕಣ್ಣಿಗೆ ದೃಶ್ಯನಾಗುವನು; ಧ್ಯಾನಮಾಡಿದರೂ ವಶ್ಯನಾಗುವನು. (ಇದಕ್ಕಿಂತ ನಮಗೆ ಇನ್ನೇನು ಬೇಕಾಗಿದೆ?)

(೩) ಎಮ್ಬಿರಾನೈ ಯೆನ್ದೈ ತನ್ದೈ ತನ್ದೈಕ್ಕುಮ್
ತಮ್ಬಿರಾನೈ ತಣ್ ತಾಮರೈಕ್ಕಣ್ಣನೈ,
ಕೊಮ್ಬರಾವು ನುಣ್ ನೇರಿಡೈ ಮಾರ್ಬನೈ,
ಎಮ್ಬಿರಾನೈ ತ್ತೊಳ್ದಾಯ್ ಮಡನೆಞ್ಜಮೇ.

ಪ್ರ|| ಮಡಮ್-ಹೇಳುವಂತೆ ಕೇಳುವ(ವಿಧೇಯವಾದ), ನೆಞ್ಜಮೇ-(ನನ್ನ) ಮನಸ್ಸೇ, ಎಮ್‌ಪಿರಾನೈ-ನಮಗೆ ಉಪಕಾರಕನಾಗಿಯೂ, ಎನ್ದೈ-ನನ್ನ ತಂದೆ, ತನ್ದೈತನ್ದೈಕ್ಕುಮ್-ನನ್ನ ಪಿತಾಮಹ-ಪ್ರಪಿತಾಮಹರೇ ಮೊದಲಾದ ಎಲ್ಲರಿಗೂ, ತಮ್ಬಿರಾನೈ-ನಾಥನಾಗಿಯೂ, ತಣ್-ಪ್ರಸನ್ನವಾದ ವೀಕ್ಷಣವುಳ್ಳ, ತಾಮರೈಕ್ಕಣ್ಣನೈ-ಪುಣ್ಡರೀಕಾಕ್ಷನಾಗಿಯೂ, ಕೊಮ್ಬು-ವಲ್ಲಿಕ್ಕೊಂಬಿಗಿಂತಲೂ, ಅರಾವು-ಸರ್ಪಕ್ಕಿಂತಲೂ, ನುಣ್-ನುಣುಪಾದ, ನೇರ್-ರಮ್ಯವಾದ, ಇಡೈ-ಕಟಿಪ್ರದೇಶವುಳ್ಳ ಲಕ್ಷ್ಮೀದೇವಿಯನ್ನು, ಮಾರ್ಬನೈ - ವಕ್ಷಸ್ಥಲದಲ್ಲಿ ಧರಿಸಿರುವವನಾಗಿಯೂ, (ಇರುವ) ಎಮ್ ಪಿರಾನೈ-ನಮ್ಮ ಸ್ವಾಮಿಯನ್ನು, ತೊಳ್ದಾಯ್-ಸೇವಿಸು (ಭಜಿಸು).

( ಸೆ–ಗಾ–ರ || )—

**ಹೇ! ಭವ್ಯ! ಮಾನಸ! ಭಜಾದ್ಯ ಮಮ ಪ್ರಭುಂ ತಂ**
**ನಾಥಂ ಚ ಮತ್ಪಿತೃ-ಪಿತಾಮಹ-ತತ್ಪಿತೄಣಾಮ್ |**
**ಪದ್ಮಾಕ್ಷಮೇವ ಮಯಿ ದಿವ್ಯಕಟಾಕ್ಷಯುಕ್ತಂ**
**ಲಕ್ಷ್ಮೀಂ ದಧಾನಮಪಿ ವಕ್ಷಸಿ ಸೂಕ್ಷ್ಮಮಧ್ಯಾಮ್ ||**

ತಾ|| (ಶ್ರಿಯಃಪತಿತ್ವಾದಿಗಳಿಂದ ಭೋಗ್ಯತಮನಾಗಿ ನಮ್ಮ ಕುಲಕ್ಕೆಲ್ಲಾ ನಾಥನಾಗಿರುವ ಅವನನ್ನು ನೀನು ಭಜಿಸೆಂದು ತಮ್ಮ ಮನಸ್ಸಿಗೆ ಉಪದೇಶಿಸುತ್ತಾರೆ.) ಎಲೈ ವಿಧೇಯವಾದ ಮನಸ್ಸೇ! ನಮಗೆ ಮಹೋಪಕಾರಕನಾಗಿ, ನಮ್ಮ ಕುಲಕ್ಕೆಲ್ಲಾ ನಾಯಕನಾಗಿ, ಸುಪ್ರಸನ್ನವಾದ ದಿವ್ಯಕಟಾಕ್ಷವುಳ್ಳ ಪುಣ್ಡರೀಕಾಕ್ಷನಾಗಿ, ವಕ್ಷಸ್ಸ್ಥಲದಲ್ಲಿ ಲಕ್ಷ್ಮೀದೇವಿಯನ್ನು ಧರಿಸಿರುವವನಾಗಿ—ಪ್ರಕಾಶಿಸುವ ನಮ್ಮ ಸ್ವಾಮಿಯನ್ನು ನೀನು ಪ್ರಣಾಮಾದಿಗಳಿಂದ ಭಜಿಸು. (ನನಗೆ ನೀನೂ ಸಹಾಯವಾಗಿದ್ದು ಭಜಿಸು—ಎಂದು ತಾತ್ಪರ್ಯ).

(೪) ನೆಞ್ಜಮೇ ನಲ್ಲೈ ನಲ್ಲೈ ಯುನ್ನೈಪ್ಪೆಱ್ಱಾಲ್
ಎಞ್ಶೆಯ್ಯೋಮಿನಿ ಯೆನ್ನ ಕುಱೈವಿನಮ್,
ಮೈನ್ದನೈ ಮಲರಾಳ್ ಮಣವಾಳನೈ,
ತುಞ್ಜುಮ್ ಪೋದುಮ್ ವಿಡಾದು ತೊಡರ್ಕಣ್ಡಾಯ್.

ಪ್ರ|| ನೆಞ್ಜಮೇ-ಮನಸ್ಸೇ, ನಲ್ಲೈ ನಲ್ಲೈ-ನೀನು ಮಾಡುವ (ಮಾಡಿದ) ಕಾರ್ಯವು ಒಳ್ಳೆಯದು ಒಳ್ಳೆಯದು (ನೀನು ಒಳ್ಳೆಯ ಗುಣಶಾಲಿಯು); ಉನ್ನೈಪ್ಪೆಱ್ಱಾಲ್-ನಿನ್ನನ್ನು ಸಹಾಯವಾಗಿ ಹೊಂದಿದರೆ, ಎಞ್ಶೆಯ್ಯೋಮ್-ಯಾವ ಕಾರ್ಯವನ್ನು ಸಾಧಿಸಲಾರೆವು? ಇನಿ-ಇನ್ನುಮೇಲೆ, ಎನ್ನ ಕುಱೈವಿನಮ್-ನಾವು ಯಾವ ಕೊರತೆಯುಳ್ಳವರು? (ನಮಗೆ ಯಾವಕೊರತೆ ಇದೆ? ಮೈನ್ದನೈ-ನಿತ್ಯಯೌವನವುಳ್ಳ, ಮಲರಾಳ್ ಮಣವಾಳನೈ-ಲಕ್ಷ್ಮೀದೇವಿಯ ಪತಿಯಾದ ಭಗವನ್ತನನ್ನು, ತುಞ್ಜುಮ್ ಪೋದುಮ್-ನಾನು ವಿಸ್ಮೃತಿಯನ್ನು ಹೊಂದಿದಾಗ್ಯೂ (ನಾನು ವಿಶ್ಲೇಷದಿಂದ ಮರೆತುಬಿಟ್ಟರೂ), ವಿಡಾದು - (ನೀನು) ಬಿಡದೆ, ತೊಡರ್ಕಣ್ಡಾಯ್-ನಿರನ್ತರವಾಗಿ ಅನುವರ್ತಿಸು

( ಸಂ-ಗ್ರಾ-ರ || )—

**ಮನ್ಮಾನಸ! ತ್ವಮಿಹ ಭಾಸಿ ಸುಸಾಧು ! ಸಾಧು !**
**ತ್ವಾಂ ಪ್ರಾಪ್ಯ ಕಿಂ ನ ತು ಭಜಾಮ ? ಕಿಮಸ್ತ್ಯಸಾಧ್ಯಮ್? |**
**ಲಕ್ಷ್ಮೀಪತಿಂ ಸತತಯೌವನಶಾಲಿನಂ ತಂ**
**ವಿಶ್ಲೇಷಭಾಜಿ ಚ ಮಯೀಹ ಸದಾ ಭಜಸ್ವ ||**

ತಾ|| (ತಮ್ಮ ಮನಸ್ಸು ಹೇಳಿದ ಹಾಗೆಯೇ ಮಾಡಿದುದರಿಂದ ಸನ್ತುಷ್ಟರಾಗಿ ಅವನನ್ನೇ ನಿರನ್ತರವಾಗಿ ಅನುವರ್ತನಮಾಡೆಂದು ಬೋಧಿಸುತ್ತಾರೆ.) ಎಲೈ ಮನಸ್ಸೇ ! ನೀನು ಮಹಾಗುಣಶಾಲಿಯು; ನಿನ್ನ ಸಾಹ್ಯವಂಪಡೆದರೆ ಯಾವಕಾರ್ಯವನ್ನು ಸಾಧಿಸಲಾರೆವು ? ನಮಗೇನು ಕೊರತೆ ಇರುವುದು ? ನಿತ್ಯಯೌವನ ಶಾಲಿಯಾದ ಆ ಲಕ್ಷ್ಮೀಪತಿಯನ್ನು ನಾನು ಮರೆತರೂ ನೀನು ಯಾವಾಗಲೂ ಬಿಡದೆ ಅನುವರ್ತಿಸು.

(೫) ಕಣ್ಡಾಯೇ ನೆಞ್ಜೇ ಕರುಮಙ್ಗಳ್ ವಾಯ್ಕ್ಕಿನ್ಱು ಓರ್,
ಎಣ್ಣಾನುಮಿನ್ಱಿಯೇ ವನ್ದಿಯಲುಮಾಱು,
ಉಣ್ಡಾನೈ ಯುಲಕೇೞುಮೋರ್ ಮೂವಡಿ
ಕೊಣ್ಡಾನೈ, ಕ್ಕಣ್ಡುಕೊಣ್ಡನೈ ನೀಯುಮೇ.

ಪ್ರ|| ನೆಞ್ಜೇ-ಮನಸ್ಸೇ, ಕರುಮಙ್ಗಳ್-ಅದ್ವೇಷ, ಆಭಿಮುಖ್ಯ, ಆಶ್ರಯಣ, ಜ್ಞಾನ ಮುಂತಾದ(ನಮ್ಮ) ಕಾರ್ಯಗಳು, ವಾಯ್ಕ್ಕಿನ್ಱು-ಫಲಿಸುವ್ವು, ಓರ್-ಒಂದು, ಎಣ್ಣಾನುಮಿನ್ಱಿಯೇ-ಚಿನ್ತೆಯೂ ಇಲ್ಲದೆ ಇರುವಾಗ, ವನ್ದು ಇಯಲುಮ್ ಆಱು-ಬಂದು ನಮಗೆ ಫಲಿಸುವ ಪ್ರಕಾರವನ್ನು, ಕಣ್ಡಾಯೇ – ನೀನು ನೋಡಿದೆಯಷ್ಟೆ. ಉಲಕೇೞುಮ್ – ಸಪ್ತಲೋಕಗಳನ್ನೂ, ಉಣ್ಡಾನೈ – ಭಕ್ಷಿಸಿದವನನ್ನು, ಓರ್ ಮೂವಡಿ ಕೊಣ್ಡಾನೈ-ಅದ್ವಿತೀಯವಾದ ಮೂರುಹೆಜ್ಜೆಗಳಿಂದ ಭೂಮಿಯನ್ನೆಲ್ಲಾ ಅಪಹರಿಸಿದವನನ್ನು, ನೀಯುಮ್-(ಅಭಿಮುಖ್ಯವಿಲ್ಲದಿದ್ದ) ನೀನೂ, ಕಣ್ಡುಕೊಣ್ಡನೈಯೇ-ಕಣ್ಡುಕೊಂಡೆಯಷ್ಟೆ !

( ಸಂ-ಗ್ರಾ-ರ || )—

ಹೇ ಮಾನಸ! ತ್ವಮಿಹ ಪಶ್ಯಸಿ ಸಿದ್ಧಿಮೇತಾಂ
ಮತ್ಕರ್ಮಣಾಂಸ್ತು ಪರಿತೋಽಪಿ ವಿನೈವ ಚಿನ್ತಾಮ್ |
ಭುಕ್ತ್ವಾ ಚ ಸಪ್ತಭುವನಾನಿ ಪದತ್ರಯೇಣ
ತ್ರಾತಾರಮೇವ ಜಗತಾಂ ತ್ವಮಪಶ್ಯ ಏವಮ್ ||

ತಾ|| (ನಮಗೆ ಯಾವಚಿನ್ತೆಯೂ ಇಲ್ಲದಿದ್ದಾಗ್ಯೂ ನಮ್ಮ ಕಾರ್ಯಸಿದ್ಧಿಯಾಗು ವಂತೆ ಅವನು ಅನುಗ್ರಹಿಸಿದನೆಂದು ನೀನೇ ತಿಳಿದುಕೊಂಡೆ-ಎಂದು ತಮ್ಮ ಮನ ಸ್ಸಿಗೆ ನಿರೂಪಿಸುತ್ತಾರೆ.) ಎಲೈ ಮನಸ್ಸೇ ! ನಮ್ಮ ಕಾರ್ಯಗಳೆಲ್ಲಾ ನಮಗೆ ಯಾವ ಚಿನ್ತೆಯೂ ಇಲ್ಲದೆ ಇರುವಾಗ (ಅವನ ಅನುಗ್ರಹದಿಂದ) ಚೆನ್ನಾಗಿ ಫಲಿಸು ತ್ತಿರುವುದನ್ನು ನೀನು ನೋಡಿದೆಯಷ್ಟೆ! ಸಪ್ತಲೋಕಗಳನ್ನೂ ಭಕ್ಷಿಸಿ, ಮೂರು ಹೆಜ್ಜೆಗಳಿಂದ ಭೂಮಿಯನ್ನೆಲ್ಲಾ ಆಕ್ರಮಿಸಿದ ಆ ಸ್ವಾಮಿಯನ್ನು ಈಗ ನೀನೂ ಕಂಡುಕೊಂಡೆಯಷ್ಟೆ !

(೭) ನೀಯುಮ್ ನಾನುಮಿನ್ನೇರ್ ನಿಱ್ಕಿಲ್ ಮೇಲುಮ್ ಮಱ್ಱೋರ್
ನೋಯುಮ್ ಶಾರ್‌ಕೊಡಾನ್ ನೆಞ್ಜಮೇ ಶೊನ್ನೇನ್,
ತಾಯುಮ್ ತನ್ದೈಯುಮಾಯಿವ್ವುಲಕಿನಿಲ್,
ವಾಯುಮೀಶನ್ ಮಣಿವಣ್ಣನೆನ್ದೈಯೇ.

ಪ್ರ|| ನೆಞ್ಜಮೇ-ಮನಸ್ಸೇ, ನೀಯುಮ್ ನಾನುಮ್-ನೀನೂ ನಾನೂ, ಇನ್ನೇರ್ ನಿಱ್ಕಿಲ್-ಈಪ್ರಕಾರ (ಅಭಿಮುಖ್ಯದೊಡನೆ) ನಿಂತರೆ, ಮೇಲ್ - ಇನ್ನುಮೇಲೆ (ಯಾವಾಗಲೂ), ತಾಯುಮ್ ತನ್ದೈಯುಮಾಯ್ - ತಾಯಿಯೂ ತಂದೆಯೂ (ಪ್ರಿಯಪರನಾಗಿಯೂ, ಹಿತಪರನಾಗಿಯೂ) ಆಗಿ, ಇವ್ವುಲಕಿನಿಲ್-ಈ ಲೋಕದಲ್ಲಿ, ವಾಯುಮ್-ಅವತರಿಸುವ, ಈಶನ್-ಸರ್ವೇಶ್ವರನಾದ, ಮಣಿವಣ್ಣನ್-ನೀಲರತ್ನದಂತೆ ಶರೀರಕಾನ್ತಿಯುಳ್ಳವನಾದ, ಎನ್ದೈ-ನಮ್ಮ ಸ್ವಾಮಿಯು, ಮಱ್ಱು ಓರ್ ನೋ ಯುಮ್-ಇತರ ಯಾವ ದುಃಖವನ್ನೂ, ಶಾರ್‌ಕೊಡಾನ್ - ಸಮೀಪಕ್ಕೆ ಬಾರದಂತೆ ನಿವಾರಣಮಾಡುವನು. ಶೊನ್ನೇನ್ - ಈ ಸತ್ಯವಾದ ಅರ್ಥವನ್ನು ನಿನಗೆ ಹೇಳಿ ರುತ್ತೇನೆ.

( ಸ--ಗಾ--ರ || )—

ಹೇ ಚಿತ್ತ ! ಮಾತೃವದಸೌ ಪಿತೃವಚ್ಚ ನಾಥೋ
ಲೋಕೇಽಪಿ ನೀಲಮಣಿವರ್ಣ ಇಹಾವತೀರ್ಣಃ ।
ಸ್ವಾಮೀ ಮಮಾಸ್ತಿ ಹಿ! ವಿಲೋಕ್ಯ ದಶಾಂ ಕಿಲೈತಾ-
ಮದ್ಯಾವಯೋರ್ನ ಭುವಿ ದುಃಖಲವಂ ಚ ಕುರ್ಯಾತ್ ॥

ತಾ|| (ಹೀಗೆ ನೀನೂ ನಾನೂ ಸೇರಿ ಅವನನ್ನು ಬಿಡದೆ ಇದ್ದರೆ ಅವನು ನಮಗೆ ಯಾವದುಃಖವೂ ಬಾರದಂತೆ ರಕ್ಷಿಸುವನೆಂದು ತಮ್ಮ ಮನಸ್ಸಿಗೆ ಸತ್ಯವಾದ

ಅರ್ಥವನ್ನು ಬೋಧಿಸುತ್ತಾರೆ.) ನಾವಿಬ್ಬರೂ ಹೀಗೆ ಅಭಿಮುಖ್ಯದೊಡನೆ ಸೇರಿ ಅವನನ್ನೇ ಆಶ್ರಯಿಸಿದರೆ, ಈ ಲೋಕದಲ್ಲಿ ಅವತರಿಸಿ ಎಲ್ಲರಿಗೂ ತಾಯಿಯಂತೆ ಪ್ರಿಯಪರನಾಗಿಯೂ, ತಂದೆಯಂತೆ ಹಿತಪರನಾಗಿಯೂ ಇದ್ದು ರಕ್ಷಿಸುವ ಆ ನೀಲ ಮಣಿವರ್ಣನಾದ ಸರ್ವೇಶ್ವರನು, ನಮ್ಮನ್ನು ಕೈಬಿಡದೆ ನಮಗೆ ಯಾವದುಃಖವೂ ಬಾರದಂತೆ ಕಾಪಾಡುವನು. ಇದು ಸತ್ಯ.

(೭) ಎನ್ದೈಯೇ ಯೆನ್ಱುಮೆಮ್ಬೆರುಮಾನೆನ್ಱುಮ್,
ಶಿನ್ದೈಯುಳ್ ವೈಪ್ಪನ್ ಶೊಲ್ಲುವನ್ ಪಾವಿಯೇನ್,
ಎನ್ದೈ ಯೆಮ್ಬೆರುಮಾನೆನ್ಱು, ವಾನವರ್,
ಶಿನ್ದೈಯುಳ್ ವೈತ್ತುಚ್ಚೊಲ್ಲುಮ್ ಶೆಲ್ವನೈಯೇ.

ಪ್ರ|| ವಾನವರ್--ನಿತ್ಯಸೂರಿಗಳು, ಎನ್ದೈ-ನಮಗೆ ಸ್ಥಿತಿಹೇತುಭೂತನೆಂದೂ, ಎಮ್‌ಪೆರುಮಾನೆನ್ಱು-ನಮ್ಮ ಸ್ವಾಮಿಯೆಂದೂ, ಶಿನ್ದೈಯುಳ್‌ವೈತ್ತು-ಮನಸ್ಸಿನಲ್ಲಿ ಇಟ್ಟು (ಚಿನ್ತಿಸಿ), ಶೊಲ್ಲುಮ್-(ಬಾಯಿಂದ) ಸ್ತೋತ್ರಮಾಡುವ, ಶೆಲ್ವನೈಯೇ-(ಉಭಯ ವಿಭೂತಿಯೆಂಬ) ಐಶ್ವರ್ಯವುಳ್ಳವನನ್ನೇ, ಪಾವಿಯೇನ್ - ಪಾಪಿಯಾದ ನಾನು, ಎನ್ದೈಯೇ ಎನ್ಱುಮ್-ನನಗೆ ಹಿತಪರನಾದ ತಂದೆಯೇ ಎಂದೂ, ಎಮ್‌ಪೆರುಮಾನೆನ್ಱುಮ್-ನನಗೆ ಸ್ವಾಮಿಯೇ ಎಂದೂ, ಶಿನ್ದೈಯುಳ್-ಮನಸ್ಸಿನಲ್ಲಿ, ವೈಪ್ಪನ್-ಇಡುವೆನು, ಶೊಲ್ಲುವನ್-(ಬಾಯಿಂದಲೂ ಸ್ತೋತ್ರಮಾಡುವೆನು.

( ಸ-ಗಾ-ರ || )—

ಯಂ ಸೂರಿವರ್ಯನಿವಹಾಃ ಪರಮಂ ಭಜನ್ತೇ
ಸ್ವಸ್ವಾಮಿನಂ ಸ್ವಪಿತರಂ ದಿವಿ ಚಿನ್ತಯನ್ತಃ |
ತಂ ಮಾನಸೇ ಮಮ ಕಥಂ ಬತ! ಪಾಪಶೀಲ-
ಸ್ಸ್ವಸ್ವಾಮಿನಂ ಸ್ವಪಿತರಂ ಚ ವೃಥಾಽತ್ರ ಮನ್ಯೇ ? ||

ತಾ|| (ನಿತ್ಯಸೂರಿಗಳಿಗೆ ತಂದೆಯಾಗಿಯೂ ಸ್ವಾಮಿಯಾಗಿಯೂ ಇರುವವ ನನ್ನು ಪಾಪಿಯಾದ ನಾನು ಹೇಗೆ ನನ್ನ ತಂದೆ, ನನ್ನ ಸ್ವಾಮಿಯೆಂದು ಭಾವಿಸಲಿ?— ಎಂದು ಹಿಂಜರಿಯುತ್ತಾರೆ.) ನಿತ್ಯಸೂರಿಗಳು ಯಾರನ್ನು ನಮ್ಮ ತಂದೆಯೆಂದೂ (ಸ್ಥಿತಿಹೇತುಭೂತನೆಂದೂ), ನಮ್ಮ ಸ್ವಾಮಿಯೆಂದೂ ಮನಸ್ಸಿನಲ್ಲಿ ಚಿನ್ತಿಸಿ, ಬಾಯಿಂದ ಸ್ತೋತ್ರಮಾಡುತ್ತಾರೋ, ಅನ್ತಹ ಉಭಯವಿಭೂತಿನಾಯಕನಾದ ಸರ್ವೇಶ್ವರನನ್ನು ಪಾಪಿಯಾದ ನಾನು ನನ್ನ ತಂದೆಯೇ ಎಂದೂ, ನನ್ನ ಸ್ವಾಮಿಯೇ

ಎಂದೂ ಮನಸ್ಸಿನಲ್ಲಿ ಚಿಂತಿಸಿ, ಬಾಯಿಂದ ಸಂಕೀರ್ತನಮಾಡುತ್ತಿದೇನೆ—(ಇದು ಹೇಗೆ ಸಂಗತವಾದೀತೆಂದು ಹಿಂಜರಿಯುತ್ತಾರೆಂದು ಭಾವವು.)

(೮) ಶೆಲ್ವನಾರಣನೆನ್ನ ಶೊಲ್ ಕೇಟ್ಟಲುಮ್,
ಮಲ್ಕುಮ್ ಕಣ್ಪನಿ ನಾಡುವನ್ ಮಾಯಮೇ.
ಅಲ್ಲುಂ ನನ್ಪಕಲುಮಿಡೈವೀಡಿನ್ರಿ,
ನಲ್ಕಿ ಯೆನ್ನೈ ವಿಡಾನ್ ನಮ್ಬಿ ನಮ್ಬಿಯೇ.

ಪ್ರ|| ಶೆಲ್ವನಾರಣನೆನ್ರ-ಶ್ರೀಮನ್ನಾರಾಯಣನೆಂಬ, ಶೊಲ್ - ನಾಮಧೇಯವನ್ನು, ಕೇಟ್ಟಲುಮ್ – ಕೇಳಿದಕ್ಷಣದಲ್ಲಿಯೇ, ಕಣ್-ಕಣ್ಣು, ಪನಿ-ನೀರನ್ನು, ಮಲ್ಕುಮ್-ಸುರಿಸುವುದು. ನಾಡುಮ್-(ನಾನೂ ಅವನನ್ನೇ) ಹುಡುಕುತ್ತಿರುವೆನು. ಮಾಯಮೇ-ಇದೊಂದು ಆಶ್ಚರ್ಯವೇಸರಿ. ನಮ್ಬಿ-ಕಲ್ಯಾಣಗುಣಪರಿಪೂರ್ಣನಾದ ಅವನು, ನಲ್-ಒಳ್ಳೆಯದಾದ (ಅವನ ಸಂಶ್ಲೇಷಕ್ಕೆ ಅನುಕೂಲವಾದ), ಅಲ್ಲುಮ್-ರಾತ್ರಿಯೂ, ಪಕಲುಮ್ - ಹಗಲೂ, ಇಡೈವೀಡಿನ್ರಿ-ವಿಚ್ಛೇದವಿಲ್ಲದೆ (ಸನ್ತತವಾಗಿ), ನಲ್ಕಿ-ಕೃಪೆಮಾಡಿ, ಎನ್ನೈ-ನನ್ನನ್ನು, ನಮ್ಬಿ-(ಸ್ವಕೀಯವಸ್ತುವೆಂದು ಭಾವಿಸಿ) ನಂಬಿ, ವಿಡಾನ್-ಬಿಡದೆ ಇರುತ್ತಾನೆ.

( ಸ-ಗಾ-ರ || )—

ಬಾಷ್ಪಾವಳಿರ್ಮಮ ಕಿಲ ಪ್ರವಹತ್ಯಹೋ ! ಶ್ರೀ-
ನಾರಾಯಣೇತಿ ವಚನಂ ತು ನಿಶಮ್ಯ ನೇತ್ರಾತ್ |
ಚಿತ್ರಂ! ತಮೇವ ವಿಚಿನೋಮಿ ಚ ಸಾದರೋಽಯಂ
ಶ್ರೀಮಾನ್ ದಿವಾನಿಶಮಹೋ ನ ನಿಜಂ ತ್ಯಜೇನ್ಮಾಮ್ ||

ತಾ|| (ಹಾಗೆ ಹಿಂಜರಿಯುತ್ತಿದ್ದ ಶ್ರೀ ಶಠಾರಿ ಮುನಿವರ್ಯರು ಹಠಾತ್ತಾಗಿ ಶ್ರೀಮನ್ನಾರಾಯಣನ ನಾಮಶ್ರವಣದಿಂದ ಆನನ್ದಬಾಷ್ಪವುಳ್ಳವರಾಗಿ ತಮ್ಮ ಅನುಭವವನ್ನು ಹೇಳಿ ವಿಸ್ಮಿತರಾಗುತ್ತಾರೆ.) ಶೆಲ್ವನಾರಣನೆಂಬ ನಾಮಧೇಯವನ್ನು ಕೇಳಿದ ಕ್ಷಣದಲ್ಲಿಯೇ ನನ್ನ ಕಣ್ಣಿನಿಂದ ನೀರು ಪ್ರವಹಿಸುತ್ತಿದೆ. ನಾನೋ ಅವನನ್ನೇ ಹುಡುಕುತ್ತಿದೇನೆ. ಇದೊಂದು ಆಶ್ಚರ್ಯವೇಸರಿ. ಸಕಲಕಲ್ಯಾಣಗುಣಪರಿಪೂರ್ಣನಾದ ಅವನು ದಿವಾರಾತ್ರವೂ ಸನ್ತತವಾಗಿ ನನ್ನಲ್ಲಿ ಕೃಪೆಮಾಡಿ ನನ್ನನ್ನೇ ನಂಬಿ (ನನ್ನನ್ನು) ಬಿಡದೆ ಇರುತ್ತಾನೆ.

(೯) ನಮ್ಬಿಯೈ ತ್ತೆನ್ಕುಱುಙ್ಗುಡಿನಿನ್ಱ ಅಚ್
ಚೆಮ್ಪೊನೇ ತಿಕೞುಮ್ ತಿರುಮೂರ್ತ್ತಿಯೈ,
ಉಮ್ಬರ್ ವಾನವರಾದಿ ಯಮ್ ಶೋದಿಯೈ,
ಎಮ್ಬಿರಾನ್ಯೆ ಯೆನ್ ಶೊಲ್ಲಿ ಮಱಪ್ಪನೋ

ಪ್ರ॥ ತೆನ್ಕುಱುಙ್ಗುಡಿ – ತಿರುಕ್ಕುಱುಙ್ಗುಡಿ ಯೆಂಬ ದಿವ್ಯದೇಶದಲ್ಲಿ, ನಿನ್ಱ -ನಿಂತಿರುವ, ನಮ್ಬಿಯೈ-ಪೂರ್ಣನಾದ ಸ್ವಾಮಿಯನ್ನು, ಅ-ಆ, ಶೆಮ್ಪೊನೇ-ಕೆಂಪು ಭಂಗಾರದಂತೆ, ತಿಕೞುಮ್-ಪ್ರಕಾಶಿಸುತ್ತಿರುವ, ತಿರುಮೂರ್ತ್ತಿಯೈ-ದಿವ್ಯಮೂರ್ತಿಯುಳ್ಳವನನ್ನು, ಉಮ್ಬರ್-ಊರ್ಧ್ವಲೋಕಸ್ಥರಾದ, ವಾನವರ್–ನಿತ್ಯಸೂರಿಗಳಿಗೆ, ಆದಿ–ಕಾರಣಭೂತನಾದ, ಅಮ್-ರಮಣೀಯವಾದ, ಶೋದಿಯೈ–ಪರಂಜ್ಯೋತಿ–ಎಂಬ ತೇಜೋಮೂರ್ತಿಯನ್ನು, ಎಮ್ಬಿರಾನ್ಯೈ–ಇಂತಹ ನನ್ನ ಸ್ವಾಮಿಯನ್ನು, ಎನ್ಶೊಲ್ಲಿ–ಏನನ್ನು ಹೇಳಿ (ಅವನಲ್ಲಿ ಯಾವನ್ಯೂನತೆಯನ್ನು ಹೇಳಿ), ಮಱಪ್ಪನ್–(ನಾನು) ಮರೆಯುವೆನು ?

( ಸ–ಗಾ-ರ ॥ )—

ಶ್ರೀಮತ್ಕುರಂಗನಗರಸ್ಥಿತಮಚ್ಯುತಂ ತಂ
ಸಮ್ಪೂರ್ಣವೈಭವಮುದಾರಸುವರ್ಣಮೂರ್ತಿಮ್ ।
ಸೂರೀನ್ದ್ರನಾಥಮಪಿ ಚಾದಿ ಪರಂ ಚ ತೇಜಃ
ಕಿಂ ವಾ ವದನ್ಮಮ ವಿಭುಂ ಬತ ! ವಿಸ್ಮರೇಯಮ್ ? ॥

ತಾ॥ (ಇಂತಹ ಮಹೋಪಕಾರಕನನ್ನು ನಾನು ಹೇಗೆ ಮರೆಯುವೆನು ? – ಎಂದು ಹೇಳುತ್ತಾರೆ.) ನಿತ್ಯಸೂರಿಗಳಿಗೂ ಕಾರಣಭೂತನಾದ ದಿವ್ಯ ತೇಜೋಮೂರ್ತಿಯು ತಿರುಕ್ಕುಱುಙ್ಗುಡಿಯಲ್ಲಿ ಬಂದು ನಿಂತು ತನ್ನ ಸೌಂದರ್ಯದಿಂದ ನನ್ನನ್ನು ವಶೀಕರಿಸಿ ನನಗೆ ಸ್ವಾಮಿಯಾಗಿ ಹೀಗೆ ಉಪಕಾರಕನಾಗಿರುವಲ್ಲಿ ನಾನು ಯಾವನ್ಯೂನತೆಯನ್ನು ಹೇಳಿ ಇವನನ್ನು ಮರೆಯಲಾದೀತು ? (ಎಂದಿಗೂ ಮರೆಯಲಾರೆನು—ಎಂದು ತಾತ್ಪರ್ಯ).

(೧೦) ಮಱಪ್ಪುಮ್ ಞಾನಮುಮ್ ನಾನೊನ್ಱುಣರ್ನ್ದಿಲನ್
ಮಱಕ್ಕುಮೆನ್ಱು ಶೆನ್ದಾಮರೈಕ್ಕಣ್ಣೊಡು,
ಮಱಪ್ಪಱ ವೆನ್ನುಳ್ಳೇ ಮನ್ನಿನಾನ್ ತನ್ನೈ.
ಮಱಪ್ಪನೋ ವಿನಿ ಯಾನೆನ್ ಮಣಿಯೈಯೇ.

ಪ್ರ|| ಮಱಪ್ಪುಮ್–ವಿಸ್ಮೃತಿಯೆಂಬುದು, ಞಾನಮುಮ್–ಜ್ಞಾನವೆಂಬುದು, ಒನ್ಱು–ಇದೊಂದನ್ನೂ, ನಾನ್ ಉಣರ್ನ್ದಿಲೇನ್–ನಾನು ತಿಳಿದಿಲ್ಲ. (ಹೀಗಿದ್ದಾಗ್ಯೂ) ಮಱಕ್ಕುಮ್ ಎನ್ಱು–ಇವನು ಮರೆತುಹೋಗುವನೆಂದು, ಶೆನ್ದಾಮರೈಕ್ಕಣ್ಣೊಡು–ಕೆಂದಾವರೆಯಂತಿರುವ ಕಣ್ಣುಗಳೊಡನೆ, ಮಱಪ್ಪಱ–ವಿಸ್ಮೃತಿಯು ಉಂಟಾಗದಂತೆ, ಎನ್ನುಳ್ಳೇ–ನನ್ನ ಹೃದಯದೊಳಗೆ, ಮನ್ನಿನಾನ್ ತನ್ನೈ–ನಿರನ್ತರ ವಾಸಮಾಡುವವನನ್ನು, ಎನ್ಮಣಿಯೈ–ನನ್ನ ನೀಲರತ್ನವನ್ನು, ಇನಿಯಾನ್ ಮಱಪ್ಪನೋ–ಇನ್ನುನಾನು ಮರೆತುಹೋಗುವೆನೋ ?

( ಸ–ಗಾ–ರ || )—

ವಿಸ್ಮರ್ತುಮಪ್ಯಹಹ ! ವೇತ್ತುಮಹಂ ನ ಶಕ್ತೋ
ಯದ್ವಿಸ್ಮರೇದಯಮಿತಿ ಸ್ವಯಮೇವ ಮತ್ವಾ |
ರಕ್ತಾಮ್ಬುಜಾಕ್ಷಿಯುಗಳೋ ಮಮ ಭಾತಿ ಚಿತ್ತೇ
ರತ್ನಂ ಕಥಂ ಮಣಿನಿಭಂ ಮನು ವಿಸ್ಮರೇಯಮ್ ? ||

ತಾ|| (ನನಗೆ ವಿಸ್ಮೃತಿಯುಂಟಾಗದಂತೆ ನನ್ನ ಹೃದಯದೊಳು ನಿತ್ಯವಾಸವಂ ಮಾಡುತ್ತಿರುವ ನೀಲಮಣಿವರ್ಣನನ್ನು ನಾನು ಹೇಗೆ ಮರೆಯುವೆನೆಂದು ಹೇಳುತ್ತಾರೆ.) ನಾನು ವಿಸ್ಮೃತಿಯೆಂಬುದನ್ನೂ ತಿಳಿಯೆನು, ಜ್ಞಾನವೆಂಬುದನ್ನೂ ತಿಳಿಯೆನು. ನಾನು ಮರೆತುಹೋಗುವೆನೆಂದು ಭಾವಿಸಿ, ಅವನೇ ತನ್ನ ಕೆಂದಾವರೆಯಂತಿರುವ (ಅನುರಾಗವಿಶಿಷ್ಟವಾದ) ಕಣ್ಣುಗಳೊಡನೆ ಪ್ರಕಾಶಿಸುತ್ತ ನನಗೆ ವಿಸ್ಮೃತಿಯುಂಟಾಗದಂತೆ ನನ್ನ ಹೃದಯದೊಳಗೆ ನಿತ್ಯವಾಸವಂ ಮಾಡುತ್ತಿರುವುದರಿಂದ ಅನ್ತಹ ನೀಲರತ್ನಪ್ರಾಯನಾದವನನ್ನು ನಾನು ಹೇಗೆ ಮರೆತುಬಿಡುವೆನು ? (ಎಂದಿಗೂ ಮರೆಯಲಾರೆನೆಂದು ಭಾವವು.)

(೧೧) ಮಣಿಯೈ ವಾನವರ್ ಕಣ್ಣನೈ ತ್ತನ್ನದೋ
ರಣಿಯೈ ತ್ತೆನ್ಕುರುಕೂರ್ ಚ್ಚಡಕೋಪನ್, ಶೊಲ್
ಪಣಿ ಶೆಯ್ದಾಯಿರತ್ತುಳ್ಳಿವೈ ಪತ್ತುಡನ್,
ತಣಿವಿಲರ್ ಕಱ್ಪರೇಲ್ ಕಲ್ವಿ ವಾಯುಮೇ.

ಪ್ರ|| ಮಣಿಯೈ-ನೀಲರತ್ನದಂತಿರುವವನನ್ನು, ವಾನವರ್-ನಿತ್ಯಸೂರಿಗಳಿಗೆ, ಕಣ್ಣೈ-ನಿರ್ವಾಹಕನಾದವನನ್ನು, ತನ್ನದೋರ್ ಅಣಿಯೈ-ತನಗೆತಾನೇ ಅದ್ವಿತೀಯವಾದ ಆಭರಣರೂಪಿಯಾದವನನ್ನು (ಇಂತಹ ಸರ್ವೇಶ್ವರನನ್ನು), ತೆ ಕುರುಕೂರ್ - ಶ್ರೀಕುರುಕಾಪುರಿಗೆ ನಿರ್ವಾಹಕರಾದ, ಶಡಕೋಪರ್-ಶ್ರೀ ಶಠಾರಿಯೆಂಬ ಆೞ್ವಾರ್ರು, ಶೊಲ್-ಸೂಕ್ತಿಗಳಿಂದ, ಪಣಿಶೆಯ್ದ-ಸ್ತುತಿಸಲು ರಚಿಸಿದ, ಆಯಿರತ್ತುಳ್-ಸಹಸ್ರಪದ್ಯಗಳೊಳು, ಇಪ್ಪತ್ತು - ಈ ಹತ್ತು ಪದ್ಯಗಳನ್ನು, ಉಣರ್--ಅರ್ಥಸಹಿತವಾಗಿ, ತಣಿವು ಇಲರ್-ತಾಮಸವಾಡದವರಾಗಿ (ಕ್ಷಿಪ್ರವಾಗಿ), ಕಱ್ಪಾರೇಲ್-(ಗುರುಮುಖದಿಂದ) ಕಲಿತರೆ, ಕಲ್ವಿ-(ಆ) ವಿದ್ಯೆಯು, ವಾಯುಮ್-ಫಲರೂಪವಾದ ನಿತ್ಯಕೈಙ್ಕರ್ಯದೊಡನೆ ಸೇರಿದುದಾಗುವುದು.

( ಸ-ಗಾ-ರ || )—

ಮಾಣಿಕ್ಯವರ್ಣಮಪಿ ಸೂರಿವರೇನ್ದ್ರನಾಥಂ
ಕೃಷ್ಣಂ ತಮಪ್ರತಿಮಸುನ್ದರಮೂರ್ತಿಮಾಶವ್ |
ಸ್ತೋತುಂ ಶಠಾರಿರತನೋತ್ಸುರಸಂ ಸಹಸ್ರಂ
ತತ್ರೇದಮೇವ ದಶಕಂ ಪಠತಾಂ ಹಿ ಸಿದ್ಧಿಃ ||

ತಾ|| (ಈ ದಶಕವನ್ನು ಕಲಿತವರಿಗೆ ನಿರತಿಶಯಪುರುಷಾರ್ಥವಾದ ಭಗವತ್ಕೈಙ್ಕರ್ಯವು ಸಿದ್ಧಫಲವಾಗುವುದೆಂದು-ಫಲಶ್ರುತಿಯನ್ನು ಹೇಳುತ್ತಾರೆ.) ನೀಲಮಣಿವರ್ಣನಾಗಿಯೂ, ನಿತ್ಯಸೂರೀಶ್ವರನಾಗಿಯೂ, ಸ್ವಯಂ ಅದ್ವಿತೀಯಾಭರಣ ರೂಪಿಯಾಗಿಯೂ ಇರುವ ಸರ್ವೇಶ್ವರನನ್ನು ಸ್ತೋತ್ರಮಾಡುವುದಕ್ಕಾಗಿ ಶ್ರೀ ಶಠಾರಿ ಮುನಿವರ್ಯರು ವಾಚಿಕ ಕೈಂಕರ್ಯರೂಪವಾಗಿ ರಚಿಸಿರುವ ಸಹಸ್ರಪದ್ಯಮಾಲೆಯೊಳು ಈ ದಶಕವನ್ನು ಅರ್ಥಸಹಿತ ಕಲಿತವರಿಗೆ ಶ್ರೀ ಭಗವತ್ಕೈಂಕರ್ಯಸಿದ್ಧಿಯು ಕ್ಷಿಪ್ರವಾಗಿಯೇ ಫಲಿಸುವುದೆಂದು ತಾತ್ಪರ್ಯ.

---

—(ದ್ರು-ಉ-ಸಂ || )—

ಇತ್ಥಂ ಶ್ರಿಯಃಪತಿಕೃತ ಸ್ವಸಮಸ್ತದೇಹ-
ಸಂಶ್ಲೇಷಲಕ್ಷಣಫಲಸ್ಯ ಸುದುರ್ಲಭಸ್ಯ |
ಭಕ್ತಾದಿವತ್ ಸ್ವಗಣನೇಽಪಿಚ ತತ್ಪ್ರಸಾದಾ-
ನ್ನಿರ್ಹೇತುಕತ್ವಮವದದ್ವಶಮೇ ಶಠಾರಿಃ ||

---

—( ದ್ರ-ಉ-ತಾ-ರ ||)—

ವಿಶ್ವಗ್ವಿಶ್ರಾನ್ತಿದೃಶ್ಯಂ ವಿಗಣನಸುಲಭಂ ವ್ಯಕ್ತಪೂರ್ವೋಪಕಾರಂ
ಸ್ವಾನ್ತಸ್ಯೈಕಾಗ್ರ್ಯಹೇತುಂ ಸ್ವಯಮುದಯಜುಷಂ ಬನ್ಧಮಾತ್ರೋಪ
ಯಾತಮ್ |
ಚಿನ್ತಾಸ್ತುತ್ಯಾದಿಲಕ್ಷ್ಯಂ ನತಜನಸತತಶ್ಲೇಷಿಣಂ ದರ್ಶಿತಾರ್ಚಂ
ಸ್ಮೃತ್ಯೈ ಚಿತ್ತೇ ವಿಷಣ್ಣಂ ಸ್ವವಿತರಣಮುಖೌದಾರ್ಯತುಷ್ಟ್ಯೋಽಭ್ಯಚಷ್ಟ ||

ಆದಾವಿತ್ಥಂ ಪರತ್ವಾದಖಿಲಸಮುತಯಾ ಭಕ್ತಸೌಲಭ್ಯಭೂಮ್ನಾ
ನಿಶ್ಶೇಷಾಗಸ್ಸಹತ್ವಾತ್ಕೃಪಣಸುಘಟನಾಚ್ಛಕ್ಯಸಂರಾಧನತ್ವಾತ್ |
ಸ್ವಾದುಸ್ವೋಪಾಸನತ್ವಾತ್ ಪ್ರಕೃತಿಋಜುತಯಾ ಸಾತ್ಮ್ಯಭೋಗಪ್ರದತ್ವಾ
ದವ್ಯಾಜೋದಾರಭಾವಾದಮುನುತಶತಕೇ ಮಾಧವಂ ಸೇವ್ಯಮಾದ್ಯೇ ||

---

(ಈ ದಶಮದಶಕದ ಸಾರಾಂಶ)—

ಶ್ರಿಯಃಪತಿಯಾದ ಭಗವನ್ತನು ಹೀಗೆ ತಮ್ಮೊಡನೆ ಸರ್ವಾವಯವಸಂಶ್ಲೇಷವಂ ಮಾಡಿದುದಕ್ಕೆ ಕಾರಣವೇನೆಂದು ಶ್ರೀ ಶಠಾರಿಮುನಿವರ್ಯರು ತಮ್ಮೊಳು ವಿಚಾರಿಸುತ್ತ, ತಮ್ಮ ಆಕಿಂಚನ್ಯವನ್ನು ತಿಳಿದು, ಈಶ್ವರನ ನಿರ್ಹೇತುಕವಾದ ಮಹೋಪಕಾರಿತ್ವವೇ ಆ ಸಂಶ್ಲೇಷಕ್ಕೆ ಕಾರಣವೆಂದು ನಿರ್ಣಯಿಸಿರುತ್ತಾರೆ.

---

## (ಈ ಪ್ರಥಮಶತಕದ ಸಾರಾಂಶ)

ಈ ಪ್ರಥಮಶತಕದಲ್ಲಿ ಸರ್ವೇಶ್ವರನ ಈಗುಣಗಳು ಕ್ರಮೇಣ ವರ್ಣಿಸಲ್ಪಟ್ಟಿವೆ,—

(೧) ಸರ್ವಸ್ಮಾತ್ಪರತ್ವ (೨) ಸರ್ವಸಮಾಶ್ರಯಣೀಯತ್ವ (೩) ಸೌಲಭ್ಯ (೪) ಅಪರಾಧಸಹತ್ವ (೫) ಸೌಶೀಲ್ಯಾತಿಶಯ (೬) ಸ್ವಾರಾಧತ್ವ (೭) ಆಶ್ರಯಣಸ್ವಾರಸ್ಯ (೮) ಆರ್ಜವಗುಣ (೯) ಸಾತ್ಮ್ಯಭೋಗಪ್ರದತ್ವ (೧೦) ನಿರ್ಹೇತುಕಮಹೋಪಕಾರಿತ್ವ—ಈ ಪ್ರಕಾರ ಕ್ರಮೇಣ ೧೦ ದಶಕಗಳ ತಾತ್ಪರ್ಯ ಸಂಗ್ರಹ.

**ಶ್ರೀಭಗವತ್ಕೈಂಕರ್ಯಪರವಾದ ಈ ಪ್ರಥಮಶತಕದಲ್ಲಿ ರಕ್ಷಕತ್ವವು ಪ್ರತಿಪಾದಿತವಾಗಿದೆ.**

ಶ್ರೀಮದ್ಯಾದವಶೈಲಶೃಙ್ಗರವಿಣಾ ಶ್ರೀಕಲ್ಕಿಸಿಂಹಾತ್ಮನಾ
ಶ್ರೀಮಲ್ಲೇಶ್ವರಕೃಷ್ಣಸನ್ನಿಧಿಜುಷಾ ಕಲ್ಯಾಣಪುರ್ಯಾಮಿಹ ।
ಸರ್ವೇಷಾಂ ಜಗತಾಂ ತಮಶ್ಶಮಯತಾ ಕರ್ಣಾಟವಾಣ್ಯಾಽಧುನಾ
ವ್ಯಾಖ್ಯಾತಂ ಶತಕಂ ಕಿಲಾದಿಮಮಿದಂ ಗಾಥಾಸಹಸ್ರೇ ಮುನೇಃ ॥
ಸಹಸ್ರಗಾಥಾರತ್ನಾವಳ್ಯಾಖ್ಯಾ ವ್ಯಾಖ್ಯಾ ಮಯಾಕೃತಾ ।
ಗೈರ್ವಾಣೀ ಪ್ರಥಮಂ ತತ್ರ ವ್ಯಾಖ್ಯಾತಂ ಶತಕಂ ಶುಭಮ್ ॥
ಮಮ ಶ್ರೀಕಲ್ಕಿಸಿಂಹಸ್ಯ ಭಕ್ತಾ ಭಗವತೋ ಹರೇಃ ।
ಶಠಾರಿವತ್ಸ್ವಯಂ ಭೋಗ್ಯಾಃ ಪರಮಾನನ್ದಮಾಪ್ನುಯುಃ ॥

---

ಇಂತು ಶ್ರೀಶಠಾರಿ ಮುನಿವರ್ಯ ವಿರಚಿತವಾದ
ತಿರುವಾಯ್ಮೊಳಿಯೆಂಬ
ಪ್ರಸಿದ್ಧವಾದ ಸಹಸ್ರಗಾಥಾತ್ಮಕ-ದ್ರಾವಿಡ ದಿವ್ಯಪ್ರಬನ್ಧದ
**ಲಲಿತಸರಣಿಯೆಂಬ ಕರ್ಣಾಟಭಾಷಾಟೀಕೆಯೊಳ್**
ಪ್ರಥಮಶತಕದ ವ್ಯಾಖ್ಯಾನವು ಇಲ್ಲಿಗೆ
ಸಂಪೂರ್ಣವಾಗಿದೆ.

---

(ಈ ಸಹಸ್ರಗಾಥಾವ್ಯಾಖ್ಯಾನವೂ, ಸಹಸ್ರಗಾಥಾರತ್ನಾವಳಿಯೆಂಬ ಸಂಸ್ಕೃತ ಪರಿವರ್ತನವೂ ಸಕಲಲೋಕೋಜ್ಜೀವನಕ್ಕಾಗಿ ಶ್ರೀ ಕಲ್ಕಿಸಿಂಹ ಸ್ವಾಮಿಯವರಿಂದ ವಿರಚಿತವಾಗಿವೆ.)

ಶ್ರೀಮತೇ ಶಠಕೋಪಾಯ ನಮಃ
ಶ್ರೀಮತೇ ಕಲ್ಕಿಸಿಂಹ ಸ್ವಾಮಿನೇನಮಃ.

---

ವಿ. ಬಿ. ಸುಬ್ಬಯ್ಯ ಅಂಡ್ ಸನ್ಸ್, ಬೆಂಗಳೂರು ಸಿಟಿ.